# ಮಾನಸಿ

NOV 93

ತಿಂಗಳ ಪತ್ರಿಕೆ    ನವೆಂಬರ್ 1993

★ ಪರ್ಯಾಯ ಆರ್ಥಿಕಾಭಿವೃದ್ಧಿ ಚಟುವಟಿಕೆಗಳು

★ ವಿಶ್ವ ಮಹಿಳಾ ಸಮಾವೇಶಗಳು

★ ಹೊಸ ಗರ್ಭ ನಿರೋಧಕಗಳು

★ ಹುಲಿಗೆವ್ವ, ಎಲ್ಲವ್ವನೇ !

★ ತಸ್ಲಿಮಾ ನಸರೀನ್

# ಮಾನಸ
ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೧೦

ನವೆಂಬರ್- ೧೯೯೩





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**
ನಂ–457, 12ನೇ ಅಡ್ಡರಸ್ತೆ
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086



ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.


## ಈ ಸಂಚಿಕೆಯಲ್ಲಿ...




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭



# ಸಂಪಾದಕೀಯ

ಅಂತರ ರಾಷ್ಟ್ರೀಯ ಮಹಿಳಾ ವರ್ಷ (1975) ಮತ್ತು ಮಹಿಳಾ ದಶಕಗಳ ಘೋಷಣೆಯಾದಂದಿಂದ ಮೂರು ವಿಶ್ವ ಮಹಿಳಾ ಸಮಾವೇಶಗಳು ನಡೆದು ಈಗ ನಾಲ್ಕನೆಯದಕ್ಕೆ ತಯಾರಿಯಾಗುತ್ತಿದೆ. ಸರ್ಕಾರಗಳು (ಸಂಯುಕ್ತ ರಾಷ್ಟ್ರಗಳ) ನಡೆಸುವ ಇಂತಹ ಸಮಾವೇಶಗಳಿಗೆ ಯಾವಾಗಲೂ ಮಿತಿಗಳಿದ್ದೇ ಇರುವದರಿಂದಲೇ ಅವಕ್ಕೆ ಪರ್ಯಾಯವೆಂಬಂತೆ ಮಹಿಳಾ ಚಳವಳಿಗಳು, ಸರ್ಕಾರೇತರ ಸಂಸ್ಥೆಗಳು ಸಮಾನಾಂತರ ಸಮಾವೇಶಗಳನ್ನು ಇದರ ಒಟ್ಟೊಟ್ಟಿಗೇ ನಡೆಸುತ್ತಾ ಬಂದಿವೆ. ಸಣ್ಣ-ಸಣ್ಣ ಮಟ್ಟಗಳಲ್ಲಿನ ಪ್ರಯತ್ನಗಳನ್ನು, ಚಿಂತನೆಗಳನ್ನು ಒಂದು ವಿಸ್ತಾರ ವೇದಿಕೆಗೆ ತಂದು, ಒಂದು ಒಟ್ಟಾರೆಯಾದ ಪರಿಣಾಮವನ್ನು ಉಂಟುಮಾಡುವಲ್ಲಿ ಇಂತಹ ಬೃಹತ್ ಸಮಾವೇಶಗಳ ಪಾತ್ರ ತುಂಬಾ ಹಿರಿದು.

ಆದೇನೇಯಾದರೂ, ಇಂತಹ ದೊಡ್ಡ ಮಟ್ಟದ ಸಮಾವೇಶಗಳ ಮಾಹಿತಿಯನ್ನು ಪಡೆಯುವವರು, ಭಾಗವಹಿಸುವವರು ಕೆಲವರು ಮಾತ್ರ. ತಮ್ಮನ್ನು ಮಹಿಳಾ ಚಳವಳಿಯ 'ವಕ್ತಾರ'ರೆಂದು ಭಾವಿಸಿಕೊಳ್ಳುವವರು, ಅಡಕೆಮಿಕ್ ವಲಯಗಳಲ್ಲಿ, ಕೆಲ ಸರ್ಕಾರೀ ಇಲಾಖೆಗಳಲ್ಲಿ ಉನ್ನತ ಸ್ಥಾನದಲ್ಲಿರುವವರು ಮತ್ತು ವಿದೇಶೀ ದತ್ತಿ ಸಂಸ್ಥೆಗಳಲ್ಲಿರುವ ಕೆಲವರು ಹೆಚ್ಚಾಗಿ ಇಂತಹ ಸಮಾವೇಶಗಳಲ್ಲಿ ಭಾಗವಹಿಸುತ್ತಾ ಬಂದಿರುವವರು. ಇದು ಎಷ್ಟು ಸದ್ದಿಲ್ಲದೆ ನಡೆಯುತ್ತಾ ಬಂದಿದೆಯೆಂದರೆ ಈವರೆಗೆ ನಡೆದ ಸಮಾವೇಶಗಳ ಯಾವ ಮಾಹಿತಿಯೂ ಇಂತಹ ಕೆಲ ವಲಯಗಳಿಂದ ಹೊರಬಂದಿಲ್ಲ. ಹೀಗಾಗಿ ತುಂಬಾ ವ್ಯಾಪಕ ರೀತಿಯಲ್ಲಿ ಪ್ರಚಾರಕ್ಕೆ ಬರಬೇಕಾಗಿದ್ದ ವಿಶ್ವ ಸಮಾವೇಶಗಳ ಮಾಹಿತಿಗಳು ಕೆಲವೇ 'ಕೇಂದ್ರ'ಗಳಲ್ಲಿ ಸಿಕ್ಕಿಹಾಕಿಕೊಂಡಿವೆ.

ಇಂತಹ ಪರಿಸ್ಥಿತಿಯ ಅರಿವು ಉಂಟಾಗುತ್ತಿದ್ದಂತೆಯೇ 95ರಲ್ಲಿ ನಡೆಯಲಿರುವ ನಾಲ್ಕನೇ ವಿಶ್ವ ಸಮಾವೇಶದ ಬಗ್ಗೆ ಮಾಹಿತಿ ಪ್ರಸರಣಕ್ಕಾಗಿ ಕೆಲ ವಲಯಗಳು ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಿವೆ. ಸಣ್ಣ, ಸಣ್ಣ ಮಟ್ಟಗಳಲ್ಲಿ ಪೂರ್ವಭಾವಿ ಸಭೆಗಳನ್ನು ನಡೆಸುವುದು, ಸಣ್ಣ ಮಟ್ಟಗಳಲ್ಲಿ ಕಷ್ಟಪಟ್ಟು ಪ್ರಾಮಾಣಿಕವಾಗಿ ದುಡಿಯುತ್ತಾ ವಿಶ್ವ ಸಮಾವೇಶಗಳಲ್ಲಿ ಭಾಗವಹಿಸುವುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿರದಂತಹ ಮಹಿಳೆಯರನ್ನು ಸಮಾವೇಶಕ್ಕೆ Sponsor ಮಾಡುವುದು, ಲಭ್ಯವಿರುವ ಮಾಹಿತಿಗಳನ್ನು ಪ್ರಾದೇಶಿಕ ಭಾಷೆಗಳಿಗೆ ತರ್ಜುಮೆ ಮಾಡಿ ಪ್ರಸರಣ ಮಾಡುವುದು ಮುಂತಾದ ಕೆಲಸಗಳನ್ನು ಪ್ರಾರಂಭಿಸಿವೆ. ಇದರ ಮಿತಿಗಳು, ಇದರೆಡೆಗಿನ ಟೀಕೆಗಳೇನೇಯಿದ್ದರೂ ಇಂತಹ ಪರಿವರ್ತನೆಯಂತೂ ಶುಭ ಸೂಚನೆಯೇ. ಎಲ್ಲಾ ಭಾಗಗಳ ಗ್ರಾಮೀಣ ಮಹಿಳೆಯರ, ಕೆಳಸ್ತರಗಳ ಮಹಿಳೆಯರ ದನಿಗಳು ವಿಶ್ವ ಸಮಾವೇಶಗಳಲ್ಲಿ ಹೆಚ್ಚೆಚ್ಚು ಕೇಳಿ ಬರಲು ಪ್ರಾರಂಭಿಸಿದಾಗಲೇ ಅದರ ಅರ್ಥವತ್ತತೆ ಹೆಚ್ಚುವುದು. ಹೀಗಾಗಲೆಂದು ಆಶಿಸೋಣ.

# ಮಹಿಳೆಯರ ಪರ್ಯಾಯ ಆರ್ಥಿಕಾಭಿವೃದ್ಧಿ ಚಟುವಟಿಕೆಗಳು

**ಜಿ. ರಾಜಮ್ಮ**

ಸಂಚಿಕೆಯೊಂದರ ಹಿಂದೆ, ಸರ್ಕಾರ ಮಹಿಳೆಯರ ಅಭಿವೃದ್ಧಿಗೆಂದು, ಇನ್ನೂ ನಿರ್ಧಿಷ್ಟದಲ್ಲಿ ಆರ್ಥಿಕ ಅಭಿವೃದ್ಧಿಗಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಬರೆಯಲಾಗಿತ್ತು. ಇಂತಹ ಕಾರ್ಯಕ್ರಮಗಳ ವಿವರಣೆಯನ್ನು ಕೊಡುತ್ತಲೇ ವೆಂ. ವನಜಾ ಅವರು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶಗಳ ಹಿನ್ನಲೆಯಲ್ಲಿ ಅವುಗಳ ಪರಿಣಾಮ ಕುರಿತ ಅತೀ ಸಂಕ್ಷಿಪ್ತ ವಿಮರ್ಶೆಯೊಂದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದರು. ಒಂದು ಅಖಂಡ ದೃಷ್ಟಿಕೋನದ ಕೊರತೆಯಿಂದ ಅವು ದಾರುಣ ರೀತಿಯಲ್ಲಿ ಸೋಲು ಕಾಣುತ್ತಿರುವುದನ್ನು ಅಲ್ಲಿ ಪ್ರಸ್ತಾಪಿಸಲಾಗಿತ್ತು.

ಸರ್ಕಾರದ ಇಂತಹ ಕಾರ್ಯಕ್ರಮಗಳು ಒಂದು ಕಡೆಯಾದರೆ, ಇನ್ನೊಂದು ಕಡೆಯಲ್ಲಿ ಕರ್ನಾಟಕದ ಎಲ್ಲೆಡೆ ಕಾರ್ಯಶೀಲವಾಗಿರುವ ನೂರಾರು ಸ್ವಯಂ ಸೇವಾ ಸಂಸ್ಥೆಗಳನ್ನೂ ಸೇರಿದಂತೆ ಹಲವಾರು ಸರ್ಕಾರೇತರ ಸಂಘ-ಸಂಸ್ಥೆಗಳು ಮಹಿಳೆಯರ ಆರ್ಥಿಕಾಭಿವೃದ್ಧಿ ಚಟುವಟಿಕೆಗಳಲ್ಲಿ ವಿಸ್ತಾರವಾಗಿ ತೊಡಗಿಕೊಂಡಿವೆ. ಸಂಕುಚಿತ ದೃಷ್ಟಿಕೋನದ ಸರ್ಕಾರೀ ಕಾರ್ಯಕ್ರಮಗಳಿಗೆ ಒಂದು ಪರ್ಯಾಯವಾದ ಹೆಚ್ಚು ಅಖಂಡ ದೃಷ್ಟಿಕೋನ ಇಲ್ಲೆಲ್ಲಾ ಹೇಳಿಕೊಳ್ಳಲ್ಪಡುತ್ತಿರುವ ಧೋರಣೆಯಾದರೂ, ಕಾರ್ಯಗತಗೊಳ್ಳುವಲ್ಲಿ ಅನಿವಾರ್ಯವಾಗಿ ಕೊರತೆಗಳು ನುಸುಳಿ ಯಶಸ್ಸು ಪೇಲವಗೊಳ್ಳುತ್ತದೆ. ಅಲ್ಲದೆ ಅನೇಕ ಸ್ವಯಂಸೇವಾ ಸಂಸ್ಥೆಗಳಿಗೆ ವಿದೇಶೀ ಹಣ ಸಹಾಯ ದೊರೆಯುವುದರಿಂದ ಕೆಲ ರಾಜಕೀಯ ಪ್ರಶ್ನೆಗಳಿಗೂ ಒಳಗಾಗಿವೆ. ಅದೇನೇಯಾಧರೂ ಅವುಗಳ ಪರಿಣಾಮ ಅಧ್ಯಯನ ಯೋಗ್ಯ. ಈ ನಿಟ್ಟಿನಲ್ಲಿನ ಮುಂದುವರೆದ ಚರ್ಚೆಗೆ ಸಹಾಯಕವಾಗಲೆಂಬ ಕಾರಣಕ್ಕಾಗಿ ಜಿ. ರಾಜಮ್ಮ ಅವರು ಅಂತಹ ಸ್ವಯಂಸೇವಾ ಸಂಸ್ಥೆಗಳ ಬಗ್ಗೆ ನಡೆಸಿರುವ ವಿಷಯ ಅಧ್ಯಯನದಿಂದ ಕೆಲವು ವಿವರಗಳನ್ನು ಇಲ್ಲಿ ಆಯ್ದುಕೊಡಲಾಗಿದೆ. ಇದು ವಿಷಯಾಧ್ಯಯನವಾದರೂ ಸ್ವಯಂಸೇವಾ ಸಂಸ್ಥೆಗಳ ಆರ್ಥಿಕಾಭಿವೃದ್ಧಿ ಚಟುವಟಿಕೆಗಳ ಬಗ್ಗೆ ಒಂದು ಒಟ್ಟು ಚಿತ್ರಣವನ್ನು ಕೊಡುತ್ತದೆ.

ಕರ್ನಾಟಕದಲ್ಲಿನ ಆರ್ಥಿಕಾಭಿವೃದ್ಧಿ ಚಟುವಟಿಕೆಗಳ ಬಗ್ಗೆ ಒಂದು ಸಂಪೂರ್ಣ ಚಿತ್ರಣ ಕೊಡುವ ಉದ್ದೇಶದಿಂದ ಇಲ್ಲಿ ಮೂರನೇ ಗುಂಪಿಗೆ ಸೇರುವ ಸಹಕಾರೀ ಚಟುವಟಿಕೆಗಳ ಬಗ್ಗೆ ಮುಂಬರುವ ಸಂಚಿಕೆಯಲ್ಲಿ ಬರೆಯಲಾಗುವುದು.

## 1. ಮುನ್ನುಡಿ

ಮಹಿಳೆಯರ ಪ್ರಶ್ನೆಯನ್ನು ಕುರಿತಂತೆ ಹೆಚ್ಚಿನ ಅರಿವು ಮೂಡುತ್ತಾ ಹೋಗುತ್ತಿರುವಂತೆ ತಳಮಟ್ಟದಲ್ಲಿ ಕೆಲಸ ಮಾಡುತ್ತಿರುವ ಅನೇಕ ಸಂಘ-ಸಂಸ್ಥೆಗಳು ಮಹಿಳೆಯರ ಯಾವತ್ತೂ ಕಡೆಗಣಿಸಲ್ಪಟ್ಟ ಬದುಕಿನಲ್ಲಿ ಬದಲಾವಣೆಗಳನ್ನು ತರಲು ಸಾಧ್ಯವಾಗುವಂತಹ ಮಧ್ಯ ಪ್ರವೇಶಿಕೆಗಳನ್ನು ಮಾಡುತ್ತಾ ಬಂದಿವೆ.

ಆರ್ಥಿಕಾಭಿವೃದ್ಧಿ ಚಟುವಟಿಕೆಗಳನ್ನು ಇಲ್ಲಿನ ಸಮಸ್ಯೆಗಳಿಗೆ ಒಂದು ಉತ್ತರವಾಗಿ ಕಾಣಲಾಗಿದೆ. ಆದರೆ ಅನೇಕ ಸಂದರ್ಭಗಳಲ್ಲಿ ಇಂತಹ ಚಟುವಟಿಕೆಗಳು ಮಹಿಳೆಯರ ಸ್ಥಾನಮಾನವನ್ನು ವತ್ತಷ್ಟು ಅಂಚಿಗೇ ತಳ್ಳಿವೆ. ಏಕೆಂದರೆ ಬಹುತೇಕ ಸಂಘ-ಸಂಸ್ಥೆಗಳು ವರಮಾನದಲ್ಲಿನ ಏರಿಕೆಯನ್ನೇ ಈ ಚಟುವಟಿಕೆಗಳ ಮುಖ್ಯ ಉದ್ದೇಶವಾಗಿ ಕಾಣುತ್ತವೆಯೇ ವಿನಃ ಮಹಿಳೆಯರ ಒಂದು ಒಟ್ಟಾರೆಯಾದ ಉನ್ನತಿಯನ್ನು ಮತ್ತು ಸಶಕ್ತತೆಯನ್ನು ದೃಷ್ಟಿಯಲ್ಲಿಟ್ಟುಕೊಂಡಿರುವುದಿಲ್ಲ.

ವಿವಿಧ ಅರ್ಥಿಕಾಭಿವೃದ್ಧಿ ಚಟುವಟಿಕೆಗಳನ್ನು ಪ್ರಾರಂಭಿಸುವ ಮೂಲಕ ಮಹಿಳೆಯರ ಒಟ್ಟಾರೆಯಾದ ಸಶಕ್ತತೆಯನ್ನು ತರುವಲ್ಲಿ ಕೆಲ ಸ್ವಯಂಸೇವಾ ಸಂಸ್ಥೆಗಳಲ್ಲಿ ನಡೆಯುತ್ತಿರುವ ಪ್ರಯತ್ನದ ಒಂದು ನೋಟ ಇಲ್ಲಿದೆ.

## 2. ಸನ್ನಿವೇಶ

ಮಹಿಳೆಯರೆಡೆಗಿನ ಅಸಮಾನತೆ ಮತ್ತು ಬಡತನಗಳನ್ನು ಕುರಿತ ಅರಿವು ಬೆಳೆಯುತ್ತಿರುವಾಗ್ಯೂ, ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರ ಒಟ್ಟಾರೆಯಾದ ಸ್ಥಿತಿಗತಿಯಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳೇನೂ ಆಗಿಲ್ಲ. ಸಾಮಾಜಿಕ ದೃಷ್ಟಿಕೋನಗಳು ಮತ್ತು ಆಚರಣೆಗಳು ಮಹಿಳೆಯರ ರೀತಿ-ನೀತಿಗಳನ್ನು ಮಿತಿಗೊಳಿಸಿದ್ದು, ಇದರಿಂದಾಗಿ ಪುರುಷ ಪ್ರಭುತ್ವ ಬಲಗೊಳ್ಳಲು ಮತ್ತು ಮಹಿಳೆಯರ ದಾಸ್ಯ ಮುಂದುವರೆಯುತ್ತಲೇ ಹೋಗಲು ಸಹಾಯವಾಗಿದೆ, ವಿಶೇಷವಾಗಿ ಸಮಾಜದ ದುರ್ಬಲ

ವರ್ಗಗಳಲ್ಲಿ. ಪ್ರಸ್ತುತದ ಸಾಮಾಜಿಕ ಮತ್ತು ಆರ್ಥಿಕ ಬಿಕ್ಕಟ್ಟು, ಮಹಿಳೆಯರ ನಿರುದ್ಯೋಗಕ್ಕೆ ಕಾರಣವಾಗುವ ಸಾರ್ವಜನಿಕ ವ್ಯಯದಲ್ಲಿ ಕಡಿತ, ಬಳಕೆಗಾಗಿ ಆಹಾರ ಧಾನ್ಯಗಳ ಕೊರತೆ ಮತ್ತು ಮಹಿಳೆಯರ ದೈಹಿಕ ಶ್ರಮ ಗಳನ್ನು ಹೆಚ್ಚಿಸುತ್ತಿರುವ ವಾಣಿಜ್ಯ ಬೆಳೆಗಳು ಮತ್ತು ವ್ಯವಸಾಯದ ವಾಣಿಜ್ಯೀಕರಣ, ಆರೋಗ್ಯ, ಆಹಾರ, ಶಿಕ್ಷಣ ಮತ್ತು ಸಾರಿಗೆ ಸಂಬಂಧೀ ಸಬ್ಸಿಡಿಗಳಲ್ಲಿನ ಕಡಿತ ಇವೆಲ್ಲ ಮಹಿಳೆಯರ ಸ್ಥಿತಿಗತಿಯ ಮೇಲೆ ಅತ್ಯಂತ ಪ್ರತಿಕೂಲ ಪರಿಣಾಮಗಳನ್ನುಂಟುಮಾಡಿವೆ. ಮಹಿಳೆಯರು ಕುಟುಂಬಗಳಿಗೆ ಇಂಧನ, ಮೇವು ಮತ್ತು ನೀರು ಪೂರೈಕೆಗಳಲ್ಲಿ ಹೆಚ್ಚಿನ ಜವಾಬ್ದಾರಿ ಹೊಂದಿರುವುದರಿಂದ ಹೆಚ್ಚುತ್ತಿರುವ ಪರಿಸರದ ಅವನತಿ ಮಹಿಳೆಯರ ಕೌಟುಂಬಿಕ ಮತ್ತು ಉತ್ಪಾದನಾ ಚಟುವಟಿಕೆಗಳ ಮೇಲೆ ಪರಿಣಾಮ ಬೀರುತ್ತವೆ.

ಕೋಮುವಾರು ಗಲಭೆಗಳು ಮತ್ತು ಇತರ ಮಾನವ ನಿರ್ಮಿತ ಅಲ್ಲದೆ ನೈಸರ್ಗಿಕ ವಿಕೋಪಗಳಿಂದ ಪುರುಷರ ವಲಸೆಗಳು ಹೆಚ್ಚಿದ್ದು ಮಹಿಳಾ ನಿರ್ವಹಿತ ಕುಟುಂಬಗಳು ಹೆಚ್ಚಲು ಕಾರಣವಾಗಿದೆ. ಇದು ಸುಲಭವಾಗಿ ಬಲಿಪಶುಗಳಾಗಿ ಬಿಡುವ ಕುಟುಂಬದಲ್ಲಿ ಹೆಚ್ಚು ಕಾಣುವಂತದ್ದು.

ಅಭಿವೃದ್ಧಿಗೆ ಗಮನಾರ್ಹ ಕೊಡುಗೆಯನ್ನು ಮಹಿಳೆಯರು ನೀಡುತ್ತಿದ್ದಾಗ್ಯೂ ಭಾರತದಲ್ಲಿ ಬಹುತೇಕ ಸಮಾಜಗಳಲ್ಲಿ ಪಿತೃಪ್ರಧಾನತೆಯಿಂದಾಗಿ ಅವರು ನಿರ್ದಿಷ್ಟ ಬಗೆಯ ದಾಸ್ಯಗಳಿಗೆ ಒಳಗಾಗಿದ್ದಾರೆ. ಮಹಿಳೆಯರು ಅಧಿಕಾರ, ದ್ರವ್ಯ ಮತ್ತು ಸಂಪನ್ಮೂಲಗಳೆಡೆಗೆ ಅತ್ಯಂತ ಕಡಿಮೆ ಹಿಡಿತವನ್ನು ಹೊಂದಿದ್ದು ತಮ್ಮದೇ ನೆಲ ಅಥವಾ ಆಸ್ತಿ ಹೊಂದಿರುವುದಿಲ್ಲ. ಸಾಂಸ್ಕೃತಿಕವಾಗಿಯೂ, ಕಾನೂನು ಸಂಬಂಧದಲ್ಲಿಯೂ ಅವರ ಸ್ಥಾನ ತೀರಾ ಕೆಳಗಿದ್ದು ಶಿಕ್ಷಣ, ತರಬೇತಿ ಮತ್ತು ವರಮಾನ ತರುವ ಉದ್ಯೋಗಗಳಿಗೆ ಅವರಿಗಿರುವ ಅವಕಾಶ ಗೌಣವಾದುದು. ತೀರ್ಮಾನ ಕೈಗೊಳ್ಳುವ ಅಂಗಗಳಲ್ಲಿ ಅವರ ಭಾಗವಹಿಕೆ ತೀರಾ ಕಡಿಮೆಯಿದ್ದು ಅವರ ದನಿಗಳು ಕೇಳಿಬರುವುದು ತುಂಬಾ ಕಡಿಮೆ. ಬಹುತೇಕ ಸಂದರ್ಭಗಳಲ್ಲಿ ತಮ್ಮ ದೇಹ ಮತ್ತು ಸಂತಾನೋತ್ಪತ್ತಿಯೆಡೆಗೆ ಅವರಿಗೆ ಯಾವ ನಿಯಂತ್ರಣವೂ ಇರುವುದಿಲ್ಲ.

ಭಾರತದಲ್ಲಿನ ಅಭಿವೃದ್ಧಿ ಯೋಜನೆ ಮಹಿಳೆಯರ ಸಮಸ್ಯೆಗಳನ್ನು ಯಾವಾಗಲೂ ಕಡೆಗಣಿಸುತ್ತಲೇ ಬಂದಿವೆ. ಒಟ್ಟು ಮಹಿಳಾ ಕೆಲಸಗಾರರಲ್ಲಿ 94% ಅಸಂಘಟಿತ ವಲಯದಲ್ಲಿ ಕೆಲಸ ಮಾಡುತ್ತಿದ್ದು, ಕಡಿಮೆ ಸಂಬಳ, ಹೆಚ್ಚು ಕೆಲಸದ ಅವಧಿ, ಕಡಿಮೆ ಕುಶಲತೆ ಮತ್ತು ಕೆಲಸದ ಭದ್ರತೆ ಇಲ್ಲದಿರುವುದು ಇವೆಲ್ಲ ಇಲ್ಲಿನ ಲಕ್ಷಣವಾಗಿದೆ. ಸಮಾನ ವೇತನದ ಶಾಸನವಿದ್ದಾಗ್ಯೂ ಮಹಿಳೆಯರಿಗೆ ಅಸಮಾನ ಕೂಲಿ ಎಲ್ಲ ವಲಯಗಳಲ್ಲೂ ಸರ್ವೇ ಸಾಮಾನ್ಯವಾಗಿದೆ.

### 3. ಸಮುದಾಯ ಸನ್ನಿವೇಶ

ನಾನಿಲ್ಲಿ ವಿಷಯಾಧ್ಯಯನಕ್ಕೆ ಆರಿಸಿಕೊಂಡಿರುವ ಸಂಸ್ಥೆ ತುಮಕೂರು ಜಿಲ್ಲೆಯ ತೀವ್ರ ಬರಗಾಲ ಪೀಡಿತ ಪ್ರದೇಶದಲ್ಲಿದೆ. ರೈತರು ಮಳೆಯಾಧಾರಿತ ಕೃಷಿಯ ಮೇಲೆಯೇ ಬಹುಪಾಲು ಅವಲಂಬಿತರಾಗಿದ್ದಾರೆ. ಜನಸಂಖ್ಯೆಯ 75% ಕೃಷಿಯನ್ನೇ ಆಧರಿಸಿದ್ದು ಇಳುವರಿಯ ಪ್ರಮಾಣ ತುಂಬಾ ಕಡಿಮೆ. ನೀರಾವರಿಯು ಮಳೆಯಾಧಾರಿತ ಕೆರೆಗಳನ್ನು ಅವಲಂಬಿಸಿದ್ದು ವರ್ಷದ 3-4 ತಿಂಗಳುಗಳು ಮಾತ್ರ ನೀರಿರುತ್ತದೆ. ಅತಿ ಶ್ರೀಮಂತ ರೈತರು ಸ್ವಂತ ಕೊಳವೆ ಬಾವಿಗಳನ್ನು ನೀರಾವರಿಗೆ ಹೊಂದಿರುವರಾದರೂ ಬೇಸಗೆಯಲ್ಲಿ ಭೂಜಲ 250 ರಿಂದ 300 ಅಡಿಗಳಷ್ಟು ಆಳಕ್ಕೆ ಹೋಗುತ್ತದೆ. ರಾಗಿ, ಜೋಳ, ಸಜ್ಜೆ, ಭತ್ತ ಮುಖ್ಯ ಆಹಾರ ಬೆಳೆಗಳು. ಬಟಾಣಿ, ಹುರುಳಿ ಮತ್ತು ತರಕಾರಿಗಳನ್ನು ಕೂಡ ಬೆಳೆಯಲಾಗುತ್ತದೆ. ವಾಣಿಜ್ಯ ಬೆಳೆಗಳಾದ ಶೇಂಗಾ, ಹತ್ತಿ, ಹಿಪ್ಪುನೇರಳೆ ಮತ್ತು ಕಬ್ಬು ಇತ್ತೀಚೆಗೆ ಈ ಪ್ರದೇಶಕ್ಕೆ ಕಾಲಿಟ್ಟಿವೆ.

ರೈತ ಕುಟುಂಬಗಳಲ್ಲಿ ಮಹಿಳೆಯರು ಬಿತ್ತನೆ, ನಾಟಿ, ಕಳೆ ಕೀಳುವುದು, ಕೊಯಿಲು ಬಡಿಯುವುದು ಮುಂತಾದ ಕಡಿಮೆ ಕುಶಲತೆಯವೆಂದು ಪರಿಗಣಿಸಲಾಗಿರುವ ಕೆಲಸಗಳನ್ನು ಮಾಡುತ್ತಾರೆ. ಪುರುಷರು ಬಿತ್ತನೆ, ರಾಸಾಯನಿಕ ಗೊಬ್ಬರ ಹಾಕುವುದು, ಕೀಟನಾಶಕ ಸಿಂಪಡಿಸುವುದು ಮತ್ತು ಕೊಯಿಲುಗಳನ್ನು ಮಾಡುತ್ತಾರೆ. ಮಹಿಳೆಯರಿಗೆ ಭೂಮಿಯ ಒಡೆತನವೂ ಇರುವುದಿಲ್ಲ ಮತ್ತು ಅವರು ಬೆಳೆಗಳ ಆಯ್ಕೆಯಲ್ಲಿ ಪಾತ್ರವನ್ನೂ ಹೊಂದಿರುವುದಿಲ್ಲ. ಅಲ್ಲದೆ ಆಸ್ತಿ ಅಥವಾ ವರಮಾನದ ಮೇಲೆಯೂ ಅವರಿಗೆ ಯಾರ ಹಿಡಿತವೂ ಇರುವುದಿಲ್ಲ. ಪುರುಷರಂತದ್ದೇ ಕೆಲಸವನ್ನು ಮಾಡುವಾಗಲೂ ಮಹಿಳೆಯರಿಗೆ ಅವರಿಗಿಂತ ಅತ್ಯಂತ ಕಡಿಮೆ ಕೂಲಿ ಸಿಗುತ್ತದೆ.

ಸಮಾಜ ಮತ್ತು ಕುಟುಂಬಗಳಲ್ಲಿ ಮಹಿಳೆಯರ ಸ್ಥಾನಮಾನ ತುಂಬಾ ಕೆಳಮಟ್ಟದ್ದು. ಕುಟುಂಬ ವ್ಯವಸ್ಥೆ ಪಿತೃಪ್ರಧಾನವಾಗಿದ್ದು ಪುರುಷರೇ ಕುಟುಂಬದ ಯಜಮಾನರೂ, ವಾರಸುದಾರರೂ ಆಗಿರುತ್ತಾರೆ. ಮಹಿಳೆಯರ ಅಕ್ಷರತೆಯ ಪ್ರಮಾಣ ತುಂಬಾ ಕಡಿಮೆಯಿದೆ. ಬಾಲ್ಯವಿವಾಹ, ಬಹುಪತ್ನಿತ್ವ, ಗಂಡಸರ ಕುಡಿತ, ಹೆಂಡತಿಯನ್ನು ಹೊಡೆಯುವುದು, ವೇಶ್ಯಾವಾಟಿಕೆ ಇವೆಲ್ಲ ಇಲ್ಲಿ ಕಂಡುಬರುತ್ತವೆ. ಮಹಿಳೆಯರ ಒಟ್ಟಾರೆಯಾದ ಆರೋಗ್ಯ ಸ್ಥಿತಿ ಶೋಚನೀಯವಾಗಿದ್ದು ತಮ್ಮ ದೇಹ ಮತ್ತು ಸಂತಾನೋತ್ಪತ್ತಿಗಳ ವಿಚಾರದಲ್ಲಿ ಯಾವ ಹಿಡಿತವೂ ಅವರಿಗಿರುವುದಿಲ್ಲ. ಜಾತಿ/ವರ್ಗ ಸಂಘರ್ಷಗಳು, ಲೈಂಗಿಕ ದುರಾಚಾರಗಳ ಸಂಬಂಧದ ಕೌರ್ಯವಲ್ಲದೆ ಕೌಟುಂಬಿಕ ಕೌರ್ಯಗಳು ನಿರಂತರವಾಗಿವೆ. ಮಹಿಳೆಯರು ಕುಶಲತೆಯಿಲ್ಲದ ಕೆಲಸಗಳಲ್ಲಿ ತೊಡಗಿಕೊಂಡಿದ್ದು ಅವರ ಕುಶಲತೆಗಳ ಬೆಳವಣಿಗೆಗೆ ಯಾವುದೇ ಪರ್ಯಾಯಗಳಿರುವುದಿಲ್ಲ. ಕೆಲಸಕ್ಕಾಗಿ ಇಂದಿಗೂ ಕೃಷಿ ವಲಯವನ್ನೇ ಮುಖ್ಯವಾಗಿ ಅವಲಂಬಿಸುತ್ತಾರೆ.

ಇದರ ಜತೆಗೆಯೇ ಮಹಿಳೆಯರು ಕುಟುಂಬದ ಅವಶ್ಯಕತೆಗಳನ್ನು ಪೂರೈಸುವ ನೀರು, ಇಂಧನ, ಮೇವು ಮತ್ತು ಮಕ್ಕಳ ಪಾಲನೆ-ಪೋಷಣೆಗೆ ಸಂಬಂಧಿಸಿದಂತೆ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಕೆಳಗಿನ ಕೆಲವು ಕಾರಣಗಳಿಂದ ಮಹಿಳೆಯರು ಕುಟುಂಬದ ಮುಖ್ಯಸ್ಥರಾಗಿರುವ ಸಂದರ್ಭಗಳು ಬಂದಿವೆ:

(1) ವರದಕ್ಷಿಣೆ ಕಾರಣಕ್ಕಾಗಿ ಗಂಡನಿಂದ ಬೇರ್ಪಡೆ (2) ಬಹು ಪತ್ನೀತ್ವ (3) ಕೆಲಸ ಹುಡುಕುತ್ತಾ ಗಂಡ ವಲಸೆ ಹೋಗುವುದು (4) ಗಂಡನ ಕುಡಿತ ಇತ್ಯಾದಿ.

ಅನೇಕ ಸಂದರ್ಭಗಳಲ್ಲಿ ಇವೇ ಕಾರಣಗಳು ಮಹಿಳೆಯರ ಮೇಲೆ ಅಸಾಧಾರಣ ಒತ್ತಡ ತಂದಿರುವುದುಂಟು. ಕೆಲವರಂತೂ ವೇಶ್ಯಾವಾಟಿಕೆಗೆ ಇಳಿಯಬೇಕಾದ ಸ್ಥಿತಿ ಉಂಟಾಗಿದೆ.

ಇಲ್ಲಿನ ಕೆಲವು ಹಳ್ಳಿಗಳಲ್ಲಿ ಬೆತ್ತಲೆ ಸೇವೆಯು ಆಚರಣೆಯಲ್ಲಿದ್ದು, ಮಳೆ ಬೀಳದಿದ್ದಾಗ ಮಳೆಗಾಗಿ ಪ್ರಾರ್ಥಿಸಲು ಪ್ರಾತಃಕಾಲದಲ್ಲಿ ಮಹಿಳೆಯರನ್ನು ಬೆತ್ತಲೆ ಮೆರವಣಿಗೆ ಹೋಗುವಂತೆ ಮಾಡಲಾಗುತ್ತಿತ್ತು. 1985ರಷ್ಟು ಈಚೆಗಷ್ಟೇ ಈ ಪದ್ಧತಿಗೆ ತಡೆ ತರಲಾಗಿದೆ.

ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮಹಿಳೆಯರಿಗೆ ಲಭ್ಯವಿರುವ ಅನೇಕ ಸರಕಾರೀ ಕಾರ್ಯಕ್ರಮಗಳ ಬಗ್ಗೆ ಅವರಿಗೆ ಯಾವುದೇ ಅರಿವಿರದೆ ಹೋಗಿರುವುದರಿಂದ ಅದು ಅವರಿಗೆ ದಕ್ಕುತ್ತಿಲ್ಲ. ಅಲ್ಲದೆ ವಿವಿಧ ಇಲಾಖೆಗಳ ನೌಕರಶಾಹೀ ಕಾರ್ಯವಿಧಾನಗಳನ್ನು ಪೂರೈಸುವ ಆತ್ಮ ವಿಶ್ವಾಸವೂ ಅವರಿಗಿರುವುದಿಲ್ಲ. ಅದೇನೇಯಾದರೂ ಪುರುಷರು IRDP, ಕೃಷಿ ಸಾಲಗಳೇ ಮುಂತಾದ ಅನೇಕ ಕಾರ್ಯಕ್ರಮಗಳ ಲಾಭ ಪಡೆದಿರುತ್ತಾರೆ.

ತಮ್ಮ ಗಂಡಸರುಗಳು ಪಡೆದುಕೊಂಡ ಸಾಲವನ್ನು ಸರಿಯಾಗಿ ತೀರಿಸದೇ ಹೋಗುವುದರಿಂದ ಅವರ ಹೆಂಡತಿಯರು ಅವರಿಗೆ ಸಿಗುವ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆ. ಮಹಿಳೆಯರು ಮುಖ್ಯಸ್ಥರಾಗಿರುವ ಕುಟುಂಬಗಳಿಗೆ ಸರಕಾರೀ ಅಧಿಕಾರಿಗಳಿಂದ ಯಾವುದೇ ಪ್ರಾಮುಖ್ಯತೆ ದೊರೆಯುವುದಿಲ್ಲ.

## 4. ಸಂಸ್ಥೆಯ ಉದ್ದೇಶಗಳು

—ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಲ್ಲಿನ ತೀವ್ರ ಅಸಮಾನತೆಯನ್ನು ತಗ್ಗಿಸುವುದು ಮತ್ತು ಸರ್ಕಾರ ಮತ್ತು ಅಭಿವೃದ್ಧಿ ಸೌಲಭ್ಯಗಳ ಲಾಭ ಪಡೆಯುವಂತೆ ಮಾಡುವುದು.

—ಸಾಮಾಜಿಕ-ಆರ್ಥಿಕ-ರಾಜಕೀಯ ಮತ್ತು ಸಾಂಸ್ಕೃತಿಕ ಶೋಷಣೆಗಳ ಬಗ್ಗೆ ದುರ್ಬಲ ವರ್ಗಗಳಲ್ಲಿ ಅರಿವು ಮೂಡಿಸುವುದು ಮತ್ತು ತಮ್ಮ ಹಕ್ಕುಗಳಿಗಾಗಿ ಹೋರಾಡುವಲ್ಲಿ ಅವರನ್ನು ಸಂಘಟಿಸುವುದು.

—ವಯಸ್ಕರ ಅಕ್ಷರತೆ, ಆರೋಗ್ಯ ಶಿಕ್ಷಣ ಮತ್ತು ಇನ್ನಿತರ ವಿವಿಧ ತರಬೇತಿಗಳ ಮೂಲಕ ಮಹಿಳೆಯರನ್ನು ಸಶಕ್ತಗೊಳಿಸುವುದು.

—ವಿವಿಧ ಆರ್ಥಿಕಾಭಿವೃದ್ಧಿ ಚಟುವಟಿಕೆಗಳ ಮೂಲಕ ಮಹಿಳೆಯರ ಆರ್ಥಿಕ ಮಟ್ಟವನ್ನು ಸುಧಾರಿಸುವುದು.

—ಸಣ್ಣ-ಸಣ್ಣ ಮಟ್ಟಗಳಲ್ಲಿನ ಮಹಿಳೆಯರ ಸಮಸ್ಯೆಯನ್ನು ದೊಡ್ಡ ಮಟ್ಟದಲ್ಲಿ ನಿರ್ವಹಿಸಲಿಕ್ಕಾಗಿ ತಾಲೂಕು ಮಟ್ಟದ ಫೆಡರೇಷನ್ ಸ್ಥಾಪಿಸುವುದು.

ಅನೌಪಚಾರಿಕ ಶಿಕ್ಷಣ ಮತ್ತು ಸಂಘಗಳ ರಚನೆಯನ್ನು ಸಂಸ್ಥೆಯು ತನ್ನ ಪ್ರವೇಶಿಕೆಯನ್ನಾಗಿಸಿಕೊಂಡಿತು.

ಕಾಲೋನಿಯಲ್ಲಿನ ಪ್ರತಿಯೊಬ್ಬ ಮಹಿಳೆಯೂ ವಾರಕ್ಕೆ ಐದು ರೂಪಾಯಿಗಳನ್ನು ಹಾಕುತ್ತಾ ಸಣ್ಣ ಉಳಿತಾಯ ಚಟುವಟಿಕೆಯನ್ನು ಪ್ರಾರಂಭಿಸಿದರು. ಹೀಗೆ ಎರಡು ವರ್ಷಗಳ ಉಳಿತಾಯದ ನಂತರ ಸಂಸ್ಥೆಯು ಪ್ರತಿ ಸಂಘಕ್ಕೂ ಎರಡು ಸಾವಿರ ರೂಪಾಯಿಗಳ ಕೊಡುಗೆ

ನೀಡಿತು. ಸಂಘವು ಈ ಒಟ್ಟಾರೆ ಹಣವನ್ನು ಬ್ಯಾಂಕಿನಲ್ಲಿ ಜಂಟಿ ಖಾತೆಯನ್ನು ತೆರೆದು ಇರಿಸಿತು. ಸಂಘದ ಒಬ್ಬ ಮಹಿಳೆ ಮತ್ತು ಸಂಸ್ಥೆಯ ಒಬ್ಬ ಸದಸ್ಯರ ಹೆಸರಿನಲ್ಲಿ ರುವ ಜಂಟಿ ಖಾತೆ ಅದು. ಸಂಸ್ಥೆಯು ತನ್ನ ವತಿಯಿಂದ ಸಂಘವೊಂದಕ್ಕೆ 2000 ರೂಪಾಯಿಗಳನ್ನು ಕೊಡಬೇಕಾದರೆ ಈ ಕೆಳಗಿನ ಅಂಶಗಳು ಅಲ್ಲಿರಬೇಕು.

—ಸಂಘದ ಪ್ರತಿಯೊಂದು ತೀರ್ಮಾನಗಳನ್ನೂ ಎಲ್ಲರೂ ಕೂಡಿ ತೆಗೆದುಕೊಳ್ಳಬೇಕು.

—ಸರಿಯಾದ ಪ್ಲಾನಿಂಗ್ ಇರಬೇಕು.

—ಹಣವನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸುವ ಮಟ್ಟ ತಲುಪಿರಬೇಕು.

—ಸಂಘ ರೂಪಿಸಿಕೊಂಡಿರುವ ಕಟ್ಟು-ಕಟ್ಟಳೆಗಳಿಗೆ ಬದ್ಧವಾಗಿರಬೇಕು.

—ಉಪಯೋಗಿಸಿದ ಹಣದ ಸರಿಯಾದ ಲೆಕ್ಕಾಚಾರವಿಡಬೇಕು.

ಸಂಘದ ಒಟ್ಟು ಮೊತ್ತದಲ್ಲಿ ಒಂದು ಸಣ್ಣ ಮೊತ್ತವನ್ನು ಬದಿಗಿರಿಸಿ ಅದನ್ನು ತೀರಾ ಅವಶ್ಯಕತೆ ಇರುವವರಿಗೆ ಸ್ವಯಂ ಉದ್ಯೋಗಕ್ಕಾಗಿ ವಯಕ್ತಿಕ ಸಾಲ, ಕುಟುಂಬದ ಅನಿವಾರ್ಯ ವೆಚ್ಚಗಳಾದ ಆಸ್ಪತ್ರೆ ಖರ್ಚು, ಮದುವೆ ಖರ್ಚು ಇತ್ಯಾದಿಗಳಿಗೆ ಸಾಲ ಕೊಡಲು ವ್ಯಯಿಸಲಾಗುವುದು. ಈ ಸಾಲಕ್ಕೆ ಅತ್ಯಂತ ಕಡಿಮೆ ಬಡ್ಡಿ (2%ರಿಂದ 5%) ಯನ್ನು ಹಾಕಿ, ಹಾಗೆ ಬಂದ ಹಣವನ್ನು ಸಂಘದ ಕ್ರೆಡಿಟ್ ಫಂಡ್‌ಗೆ ಸೇರಿಸಲಾಗುವುದು.

ಉಳಿದ ಹಣವನ್ನು ಗುಂಪಿನ ಆರ್ಥಿಕ ಚಟುವಟಿಕೆಗಾಗಿ ವ್ಯಯಿಸಲಾಗುವುದು. ಮಹಿಳೆಯರು ಒಂದು ಗುಂಪಾಗಿ ಸ್ಥಳೀಯ ಮಹಿಳೆಯರ ಅವಶ್ಯಕತೆಗಳನ್ನು ಗುರುತಿಸಿ ಸಣ್ಣ ಸಣ್ಣ ವ್ಯಾಪಾರಗಳನ್ನು ಪ್ರಾರಂಭಿಸಿದರು-ಕಾಳು-ಕಡಿ, ಸೊಪ್ಪು, ಸೀಗೇಕಾಯಿ ಪುಡಿ ಇತ್ಯಾದಿ.

ಪ್ರತಿ ತಿಂಗಳೂ ಸಂಘದ 2-3 ಮಹಿಳೆಯರು ಈ ಕೆಲವು ವಸ್ತುಗಳನ್ನು ಪೇಟೆಯಿಂದ ಸಗಟಾಗಿ ಕೊಂಡು ತಂದು ಹಳ್ಳಿಗರಿಗೆ ಮಾರುತ್ತಾರೆ. ಮೊದಲಿಗೆ ಇದರ ಲೆಕ್ಕವನ್ನು ಸಂಸ್ಥೆಯವರೇ ಇಡುತ್ತಿದ್ದು, ಕ್ರಮೇಣದಲ್ಲಿ ಓದು ಬರಹ ಬಲ್ಲ ಸಂಘದ ಮಹಿಳೆಯೊಬ್ಬರು ಇದರ ಜವಾಬ್ದಾರಿ ವಹಿಸಿಕೊಂಡರು. ಎರಡು ಮೂರು ವರ್ಷಗಳಲ್ಲಿ ಪ್ರತಿ ಸಂಘವೂ ತನ್ನ ಸಾಮಾನ್ಯ ಫಂಡನ್ನು ಆರರಿಂದ ಹತ್ತು ಸಾವಿರಕ್ಕೆ ಏರಿಸಿಕೊಂಡಿತು

88-89ರಲ್ಲಿ ಎಲ್ಲಾ ಮಹಿಳಾ ಸಂಘಗಳು ಒಟ್ಟಾಗಿ ಇಟ್ಟಿಗೆ ಮಾಡುವ ಕೆಲಸದಲ್ಲಿ ತೊಡಗಿಕೊಂಡವು. ಒಂದೊಂದು ಸಂಘವೂ ಒಂದೊಂದು ಜವಾಬ್ದಾರಿಯನ್ನು ವಹಿಸಿಕೊಂಡಿತು. ಮಹಿಳೆಯರು ತಾವೇ ಯೋಜನೆಯನ್ನು ರೂಪಿಸಿಕೊಂಡು ಕಚ್ಚಾ ವಸ್ತುಗಳನ್ನು ಕೊಂಡು ತಂದರು. ಇಟ್ಟಿಗೆ ಸುಡಲು ಕೆಲವು ಗಂಡಸರನ್ನು ನೇಮಿಸಿಕೊಂಡರು. ಸುತ್ತಮುತ್ತಲ ಹಳ್ಳಿಗಳಲ್ಲೇ ಇಟ್ಟಿಗೆಯನ್ನು ಮಾರಾಟ ಮಾಡಿದರು. ಪ್ರತಿ ಸಂಘಕ್ಕೂ ಇಲ್ಲಿ ನಿವ್ವಳ 400-800 ರೂ. ಲಾಭ ಸಿಕ್ಕಿತು. ಈ ಯೋಜನೆಯು ಎಲ್ಲ ಸಂಘಗಳ ಮಹಿಳೆಯರನ್ನೂ ಒಟ್ಟಿಗೆ ತಂದು ಅವರಲ್ಲಿ ಸಂಯೋಜನೆ, ನಿರ್ವಹಣೆ, ಮಾರಾಟ ಮತ್ತು ತೀರ್ಮಾನ ಕೈಗೊಳ್ಳುವಿಕೆಗಳಲ್ಲಿ ಆತ್ಮವಿಶ್ವಾಸವನ್ನು ಬೆಳೆಸಿತು.

ಹೀಗೆ ಹಣ ಗುಣಿಸುತ್ತಾ ಹೋದ ಹಾಗೆ ಸಂಘದ ಮಹಿಳೆಯರು ಅಧಿಕ ಹೂಡಿಕೆಯ ಈ ಕೆಳಗಿನ ಕೆಲವು ಚಟುವಟಿಕೆಗಳಲ್ಲಿ ತೊಡಗಿಕೊಂಡರು.

—ಕುಯಿಲಿನ ಕಾಲದಲ್ಲಿ ರಾಗಿ ಮತ್ತಿತರ ಧಾನ್ಯಗಳನ್ನು ಸಂಗ್ರಹಿಸಿಕೊಂಡು ಬೆಲೆ ಜಾಸ್ತಿಯಾದ ಕಾಲದಲ್ಲಿ ಮಾರಾಟ ಮಾಡುವುದು.

—ಕೆಲವು ಸಂಘಗಳು ಸೀಗೇಕಾಯಿಯನ್ನು ಕೊಂಡು ತಂದು ತಾವೇ ಪುಡಿಮಾಡಿ ಸುತ್ತಮುತ್ತಲ ಹಳ್ಳಿಗಳು ಮತ್ತು ಸ್ಥಳೀಯ ಮಾರುಕಟ್ಟೆಗಳಲ್ಲಿ ಮಾರತೊಡಗಿದವು.

—ಕೆಲವು ಸಂಘಗಳು ಹೊಲಗಳನ್ನು ಗುತ್ತಿಗೆಯ ಮೇಲೆ ಪಡಕೊಂಡು ಒಟ್ಟಾಗಿ ಕೃಷಿ ಮಾಡಲು ಪ್ರಾರಂಭಿಸಿದವು.

ಎರಡು ಹಳ್ಳಿಗಳಲ್ಲಿ ಸಂಘಗಳವರು ಚಂದ್ರಿಕೆಗಳನ್ನು ಕೊಂಡುತಂದು ದಿನಕ್ಕೆ ಐದು ರೂಪಾಯಿಯಂತೆ ಬಾಡಿಗೆಗೆ ಕೊಡಲು ಪ್ರಾರಂಭಿಸಿದರು. ರೇಷ್ಮೆ ಕೃಷಿಯನ್ನಾಧರಿಸಿ ತಿಂಗಳಿಗೆ ಅವರಿಗೆ 200 ರಿಂದ 700 ರೂಗಳವರೆಗೆ ದಕ್ಕತೊಡಗಿತು. ಬಾಡಿಗೆ ಕೊಡುವುದರ ಜತೆಗೆ ಚಂದ್ರಿಕೆಯು ಹಾಳಾದರೆ ರಿಪೇರಿ ಮಾಡಿ ಕೊಡುವಂತೆಯೂ, ಕಳೆದು ಹೋದರೆ ಹೊಸತನ್ನು ತಂದು ಕೊಡುವಂತೆಯೂ ಸಂಘಗಳು ಒತ್ತಾಯಿಸುತ್ತವೆ.

ಕಳೆದ ವರ್ಷದಿಂದ ಸಂಘಗಳು ತಮ್ಮ ಆರ್ಥಿಕ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳಲು ಸರ್ಕಾರಿ ಫಂಡುಗಳನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿವೆ. ಆ ನಿಟ್ಟಿನಲ್ಲಿ ಈ ಕೆಲ ಪ್ರಯತ್ನಗಳೂ ನಡೆದಿವೆ.

ಒಂದು ಹಳ್ಳಿಯಲ್ಲಿ ಸಂಘವು ರೇಷ್ಮೆ ಕೃಷಿ ಚಟುವಟಿಕೆಗಳಿಗೆ ಸರಕಾರದಿಂದ ಹಣ ಸಹಾಯ ಪಡೆದಿದೆ. ಹಣವನ್ನು ಹಿಪ್ಪು ನೇರಳೆ ಬೆಳೆಯಲು, ಹುಳುಗಳನ್ನು ಸಾಕಲು ಮತ್ತು ಗೂಡುಗಳ ಮಾರಾಟಕ್ಕೆ ಬಳಸಿಕೊಂಡಿದ್ದಾರೆ. ಈ ಚಟುವಟಿಕೆ ಉದ್ಯೋಗ ಒದಗಿಸುವುದು ಮಾತ್ರವಲ್ಲ ತುಂಬಾ ಲಾಭದಾಯಕ ಕೂಡ.

ಇನ್ನೊಂದು ಸಂಘವು ಇತರ ಸಂಘಗಳಿಂದ ಸಾಲ ತೆಗೆದುಕೊಂಡು ಸರ್ಕಾರೀ ನ್ಯಾಯಬೆಲೆ ಅಂಗಡಿಯನ್ನು ತೆರೆದಿದೆ. ಇದನ್ನು ಸಂಪೂರ್ಣ ಮಹಿಳೆಯರೇ ನಿರ್ವಹಿಸುತ್ತಿದ್ದು ಸ್ಥಳೀಯ ರಾಜಕೀಯ ಶಕ್ತಿಗಳ ಒತ್ತಡಗಳು ಬಹಳ ಇವೆ. ಸಂಸ್ಥೆಯು ಪ್ರಾರಂಭದ ಹಂತಗಳಲ್ಲಿ ಈ ಸಂಘಗಳಿಗೆ ಬೇಕಾದ ನಿರ್ವಹಣಾ ಬೆಂಬಲವನ್ನು, ತರಬೇತಿಯನ್ನು, ಇತರ ಗುಂಪುಗಳೊಟ್ಟಿಗೆ ಸಂಪರ್ಕ ಬೆಳೆಸಿಕೊಳ್ಳಲು ಸಹಾಯವನ್ನೂ ಮಾಡಿದೆ.

ಸಮುದಾಯದ ಕ್ರೆಡಿಟ್ ಫಂಡಿನಿಂದ ಲಾಭ ಪಡೆಯುವವರು ಹೆಚ್ಚಾಗಿ SC/ST ಹೆಂಗಸರೇ ಆಗಿದ್ದು ಬೇರೆ ಪಂಗಡಗಳ ಕೆಲ ತೀರಾ ಬಡಮಹಿಳೆಯರೂ ಸೇರುತ್ತಾರೆ. ಬಹುತೇಕ ಆರ್ಥಿಕಾಭಿವೃದ್ಧಿ ಚಟುವಟಿಕೆಗಳು ಗುಂಪು ಚಟುವಟಿಕೆಗಳೇ ಆಗಿವೆ. ಅದೇನೇಯಾದರೂ ಈ ಚಟುವಟಿಕೆಗಳ ಹೊರತಾಗಿ ಮಹಿಳೆಯರು ಬಿಡಿ ಬಿಡಿಯಾಗಿ ಸಾಲ ಪಡೆದು ವಯಕ್ತಿಕವಾಗಿ ಆರ್ಥಿಕಾಭಿವೃದ್ಧಿ ಕಾರ್ಯಕ್ರಮಗಳನ್ನು ಪ್ರಾರಂಭಿಸಿದ್ದಾರೆ. ಈವರೆಗೆ ಇಂತಹ 26 ಸಂಘಗಳು ಇಲ್ಲಿ ಆರ್ಥಿಕಾಭಿವೃದ್ಧಿ ಚಟುವಟಿಕೆಗಳನ್ನು ಹಮ್ಮಿಕೊಂಡಿವೆ.

ಆರ್ಥಿಕಾಭಿವೃದ್ಧಿ ಕಾರ್ಯಕ್ರಮಗಳ ಉದ್ದೇಶಗಳು ಈ ಕೆಳಗಿನ ಕೆಲವೊಂದು ಅಂಶಗಳನ್ನು ಹೊಂದಿವೆ :

—ಮಹಿಳೆಯರು ಒಂದು ಸೇರಲು ಅವಕಾಶ.

—ಸ್ಥಳೀಯ ಸಂಪನ್ಮೂಲಗಳ ಬಳಕೆ

—ಸರ್ಕಾರೀ ಸಂಪನ್ಮೂಲಗಳ ಬಳಕೆ.

—ಯೋಜನೆ, ಕಾರ್ಯಗತಗೊಳಿಸುವಿಕೆ, ನಿರ್ವಹಣೆ, ತೀರ್ಮಾನ ಕೈಗೊಳ್ಳುವಿಕೆಗಳಲ್ಲಿ ಮಹಿಳೆಯರ ಕ್ರಿಯಾಶೀಲ ಭಾಗವಹಿಕೆ.

—ಮಹಿಳೆಯರ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳ ಸುಧಾರಣೆ.

—ಸಂಘಗಳ ನಿರಂತರತೆ.

ಗುರಿ-ಉದ್ದೇಶಗಳನ್ನು ಮಹಿಳೆಯರೇ ಸಂಸ್ಥೆಯ ಸಹಾಯದಿಂದ ರೂಪಿಸಿದ್ದಾರೆ. ಆರ್ಥಿಕಾಭಿವೃದ್ಧಿ ಕಾರ್ಯಕ್ರಮಗಳೇ ಪ್ರಮುಖ ಚಟುವಟಿಕೆಯಾಗಿದ್ದು ಇದರ ಮೂಲಕ ಮಹಿಳೆಯರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತಿಗತಿಗಳ ಸುಧಾರಣೆ ಯಂತಹ ಒಟ್ಟಾರೆಯಾದ ಉದ್ದೇಶಗಳು ಸಾಧಿಸಲ್ಪಡುತ್ತವೆಯೆಂದು ನಂಬಲಾಗಿದೆ.

ಮಹಿಳೆಯರ ಸಮಾನ ಭಾಗವಹಿಕೆ ಸಂಘ ಒತ್ತು ಕೊಡುತ್ತಲೇ ಬಂದಿರುವ ಇನ್ನೊಂದು ಮುಖ್ಯ ಅಂಶ. ಸಂಘದಲ್ಲಿನ ಜವಾಬ್ದಾರಿಗಳು ಹಂಚಿಕೆಯಾಗಿರುವ ರೀತಿ ಇದನ್ನು ಹೇಳುತ್ತದೆ. ಐದರಿಂದ ಹತ್ತು ಸದಸ್ಯರಿರುವ ಐದು ಕಮಿಟಿಗಳಿದ್ದು ಪ್ರತಿಯೊಂದು ಕಮಿಟಿಯೂ ಬೇರೆ ಬೇರೆ ಜವಾಬ್ದಾರಿಗಳನ್ನು ಹೊತ್ತಿರುತ್ತದೆ: ಆರ್ಥಿಕಾಭಿವೃದ್ಧಿ ಕಮಿಟಿ, ಆರೋಗ್ಯ ಕಮಿಟಿ, ಕಾನೂನು ಸಲಹಾ ಕಮಿಟಿ, ಸರ್ಕಾರೀ ಕಾರ್ಯಕ್ರಮಗಳ ಸಂಪರ್ಕ ಕಮಿಟಿ, ಸಾಮಾಜಿಕ ಸಮಸ್ಯೆಗಳತ್ತ ಗಮನ ಕೊಡುವ ಕಮಿಟಿ.

ಮಹಿಳೆಯರು ತಮ್ಮ ಯಶಸ್ಸು-ಅಯಸ್ಸುಗಳ ಅನುಭವದ ಮೇಲೆ ಆರ್ಥಿಕಾಭಿವೃದ್ಧಿ ಚಟುವಟಿಕೆಗಳನ್ನು ಆಯ್ದುಕೊಳ್ಳುವುದನ್ನು ಕಲಿತಿದ್ದಾರೆ. ಒಂದೇ ಒಂದು ಚಟುವಟಿಕೆಯ ಬಗ್ಗೆಯೇ ಅವರು ತಲೆ ಕೆಡಿಸಿಕೊಳ್ಳುವುದಿಲ್ಲ. ವಿವಿಧ ಸಾಧ್ಯತೆಗಳನ್ನೆಲ್ಲಾ ಕುರಿತು ಚರ್ಚಿಸುತ್ತಾರೆ. ತಮ್ಮ ವರಮಾನದಲ್ಲಿನ ಹೆಚ್ಚಳ ಮತ್ತು ಆರ್ಥಿಕ ಸ್ವಾವಲಂಬನೆಯನ್ನು ಮಹಿಳೆಯರು ತಮ್ಮ ಸ್ಥಾನಮಾನವನ್ನು ಉತ್ತಮಪಡಿಸುವ ಅಂಶವೆಂದೇ ನೋಡುತ್ತಾರೆ.

### ಮಹಿಳೆಯರ ಮೇಲೆ ಪರಿಣಾಮ

ಆರ್ಥಿಕವಾಗಿ : ಆರ್ಥಿಕಾಭಿವೃದ್ಧಿ ಚಟುವಟಿಕೆಗಳ ಪರಿಣಾಮ ಎರಡು ಮಟ್ಟಗಳಲ್ಲಿ ಉಂಟಾಗಿದೆ.

1) ವೈಯಕ್ತಿಕವಾಗಿ — ಚಿಟ್‌ಫಂಡ್ ಮತ್ತು 2) ಗುಂಪು ಚಟುವಟಿಕೆಗಳಲ್ಲಿ

1) ಚಿಟ್‌ಫಂಡ್ ವ್ಯವಸ್ಥೆಯಲ್ಲಿ ಮಹಿಳೆಯರು ವೈಯಕ್ತಿಕವಾಗಿ ಸಾಲ ತೆಗೆದುಕೊಂಡು ಕೆಲವು ಸ್ವಯಂ ಉದ್ಯೋಗಗಳಾದ ಹೂವು-ಹಣ್ಣು-ತರಕಾರಿ ವ್ಯಾಪಾರ, ಕೋಳಿ-ಕುರಿ ಸಾಕಣೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇಲ್ಲಿ ಪ್ರತಿ ಮಹಿಳೆಯೂ 100 ರಿಂದ 500ರೂವರೆಗೆ ಸಾಲ ಪಡೆದು ಅತ್ಯಂತ ಕಡಿಮೆ ಬಡ್ಡಿಯೊಂದಿಗೆ ಹಿಂದಿರುಗಿಸುತ್ತಾರೆ. ಇದು ಹಳ್ಳಿಯ ಇತರ ಸಾಲ ನೀಡುವವರು ಹಾಕುವ ಬಡ್ಡಿಗಿಂತ ತುಂಬಾ ಕಡಿಮೆ. 50 ರೂಪಾಯಿ

ಗಳ ಹೂಡಿಕೆಯಿಂದ ಹೂಮಾರುವವರಿಗೆ ಸಾಮಾನ್ಯ ದಿನಗಳಲ್ಲಿ 12 ರಿಂದ 15 ರೂಪಾಯಿಗಳು ದೊರೆಯುತ್ತವೆ. ಹಬ್ಬದ ಸಂದರ್ಭಗಳಲ್ಲಿ ಆಕೆ 50ರಿಂದ 60 ರೂಪಾಯಿಗಳನ್ನು ದಿನವೊಂದಕ್ಕೆ ಸಂಪಾದಿಸುತ್ತಾಳೆ.

ತನಗೆ ಸಿಕ್ಕ ಲಾಭದಿಂದ ಆಕೆ ಸಾಲ ತೀರಿಸುತ್ತಾಳೆ. ಕೆಲ ಸಂದರ್ಭಗಳಲ್ಲಿ ಹೆಂಗಸೊಬ್ಬಳು ಪಡಕೊಂಡ ಸಾಲವನ್ನು ಆಕೆಯ ಗಂಡ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿ ನಂತರದಲ್ಲಿ ಅದನ್ನು ಬಡ್ಡಿಯೊಂದಿಗೆ ಹಿಂದಿರುಗಿಸಿ ಆಕೆ ಪಡೆದ ಸಾಲವನ್ನು ತೀರಿಸಲು ಅನುವು ಮಾಡಿರುವ ಘಟನೆಗಳುಂಟು.

**2) ಗುಂಪು ಚಟುವಟಿಕೆ :** ಗುಂಪು ಚಟುವಟಿಕೆಯಿಂದ ಬಂದ ಲಾಭ ಸಮುದಾಯ ಕ್ರೆಡಿಟ್ ಫಂಡಿಗೆ ಹೋಗುತ್ತದೆ. ಸೋಪು, ಕಾಳುಕಡಿಗಳ ಮಾರಾಟ, ಇಟ್ಟಿಗೆ ಮಾಡುವುದು, ಚಂದ್ರಿಕೆಗಳ ಬಾಡಿಗೆ, ಸಮುದಾಯ ಕೃಷಿ ಮುಂತಾದ ಎಲ್ಲ ಚಟುವಟಿಕೆಗಳಿಂದಲೂ ಹೂಡಿಕೆಯನ್ನಾಧರಿಸಿ ಅವರು ಲಾಭ ಗಳಿಸುತ್ತಾರೆ. ಅಲ್ಲದೆ ವೈಯಕ್ತಿಕ ಸಾಲಗಳಿಂದ ಬಂದ ಬಡ್ಡಿ ಹಣವೂ ಸಮುದಾಯ ಕ್ರೆಡಿಟ್ ಫಂಡಿಗೇ ಸೇರುತ್ತದೆ.

**ಒಂದು ಒಟ್ಟಾರೆಯಲ್ಲಿ**

ಸಂಘಗಳನ್ನು ಪ್ರಾರಂಭಿಸುವುದಕ್ಕೆ ಮುನ್ನ ಮಹಿಳೆಯರು 4-6 ತಿಂಗಳು ಸಂಪೂರ್ಣ ಕೃಷಿಯನ್ನೇ ಅವಲಂಭಿಸಿದ್ದು ಉಳಿದ ಸಮಯದಲ್ಲಿ ತಮ್ಮ ಸಾಮುದಾಯಿಕ ಪಾತ್ರಗಳಲ್ಲಿ ತೊಡಗಿಕೊಂಡುಬಿಡುತ್ತಿದ್ದರು. ಒಂದು ರೀತಿಯಲ್ಲಿ ಸಂಘ ಚಟುವಟಿಕೆ ಮಹಿಳೆಯರ ಕೆಲಸವನ್ನು ಹೆಚ್ಚಿಸಿದೆ. ಸಂಘ ಮತ್ತು ವಾರದ ಮೀಟಿಂಗುಗಳಲ್ಲಿನ ಜವಾಬ್ದಾರಿ ಮಹಿಳೆಯರ ಕೆಲಸದ ಗಂಟೆಗಳನ್ನು ಹೆಚ್ಚಿಸಿದೆ. ಅದೇನೆಯಾದರೂ ಕೃಷಿ ಚಟುವಟಿಕೆಗಳು ತೀವ್ರವಾಗಿರುವ ಸಮಯಗಳಲ್ಲಿ ಅವರು ತಮ್ಮ ಸ್ವಯಂ ಉದ್ಯೋಗ ಇಲ್ಲವೇ ಗುಂಪಿನ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಾರೆ.

ಪ್ರಾರಂಭದ ಹಂತಗಳಲ್ಲಿ ತಮ್ಮ ಗಂಡಂದಿರು ಆರ್ಥಿಕ ಚಟುವಟಿಕೆಗಳು ಮತ್ತು ಸಂಘದ ಮೀಟಿಂಗುಗಳಲ್ಲಿ ತಾವು ಭಾಗವಹಿಸುವುದನ್ನು ಸಹಿಸುತ್ತಿರಲಿಲ್ಲ. ಆದರೆ ಸಮುದಾಯ ಸೌಲಭ್ಯಗಳಾದ ಕುಡಿಯುವ ನೀರು, ಭೂಮಿ ಹಕ್ಕು ಪತ್ರ (ಮಹಿಳೆಯರ ಹೆಸರಲ್ಲಿ), ಮನೆಗೆ-ಹಳ್ಳಿಗಳಿಗೆ ವಿದ್ಯುತ್ತು ಮುಂತಾದವುಗಳನ್ನ ತಾವು ಪಡಕೊಂಡಾಗ ಅವರು ತಮ್ಮ ವಿರೋಧವನ್ನು ನಿಲ್ಲಿಸಿದರು ಎಂದು ಅನೇಕ ಮಹಿಳೆಯರು ಹೇಳಿಕೊಂಡಿದ್ದಾರೆ. "ಈಗ ನಾನು ಸಂಘ ಮೀಟಿಂಗಳಿಗೆ ಬಂದರೆ ಅಥವಾ ದೂರ ದೂರುಗಳಿಗೆ ತರಬೇತಿಗೆ ಹೋದರೆ ನನ್ನ ಗಂಡ ಮನೆ ನೋಡಿಕೊಳ್ಳುತ್ತಾರೆ" ಹೀಗೆನ್ನುವವರು ಸಂಘವೊಂದರ ಆರ್ಥಿಕಾಭಿವೃದ್ಧಿ ಕಮಿಟಿಯ ನರಸಮ್ಮ. ಸಂಘಗಳು ತಮ್ಮ ಕಾಲೋನಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ತರುವ ಮೂಲಕ ಮಹಿಳೆಯರ ಸಾಮಾನ್ಯವಾದ ಕೆಲಸದ ಹೊರೆಯನ್ನು ತಗ್ಗಿಸುವಲ್ಲಿ ಸಹಾಯಕವಾಗಿವೆ. ಆರೋಗ್ಯ ಕಮಿಟಿಯು ಮಹಿಳೆಯರ ಮತ್ತು ಅವರ ಕುಟುಂಬದ ಆರೋಗ್ಯ ಸಮಸ್ಯೆಗಳನ್ನು ಗುರುತಿಸುವ ಜವಾಬ್ದಾರಿ ಹೊಂದಿದ್ದು ಸಕಾಲದಲ್ಲಿ ಸೂಕ್ತ ಚಿಕಿತ್ಸೆಗೆ ಅವರನ್ನು ಒಳಗು ಮಾಡುತ್ತಾರೆ. ಮಹಿಳೆಯರು ಸಂಘ ಮತ್ತು ಆರ್ಥಿಕಾಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದರಿಂದ ಅನೇಕ ಸಮಯಗಳಲ್ಲಿ ಅವರ ಗಂಡಂದಿರು ಮತ್ತು ಮಕ್ಕಳು ಅವರಿಗೆ ಮನೆಕೆಲಸಗಳಲ್ಲಿ ಸಹಾಯ ಮಾಡುವುದುಂಟು.

ಅನೇಕ ಸಂಘಗಳು ತಮ್ಮ ಮೀಟಿಂಗುಗಳು ಮತ್ತು ಚಟುವಟಿಕೆಗಳಿಗಾಗಿ ತಮ್ಮದೇ ಆದ ಸ್ಥಳವನ್ನು ಹೊಂದಿರುವುದಿಲ್ಲ. ಸಹಕಾರದಿಂದ ಸಹಾಯ ಪಡೆಯಲು ಅವು ಪ್ರಯತ್ನಿಸುತ್ತಿವೆ. ಸದ್ಯದಲ್ಲಿ ಅವರು ಸಾಮುದಾಯಿಕ ಸ್ಥಳಗಳಾದ ಅಂಗನವಾಡಿ, ದೇವಸ್ಥಾನದ ಕಟ್ಟೆ ಇಲ್ಲವೇ ಸದಸ್ಯರೊಬ್ಬರ ಮನೆಗಳನ್ನು ಇದಕ್ಕೆ ಉಪಯೋಗಿಸುತ್ತಿದ್ದಾರೆ. ತಮ್ಮದೇ ಜಾಗ ಹೊಂದಬೇಕೆಂದು ಅವರಿಗೆ ಬಲವಾಗಿ ಅನ್ನಿಸಿದೆ. ಮಹಿಳೆಯರೇ ಸ್ವಂತ ಪ್ರಯತ್ನದಿಂದ ಅದನ್ನು ಪಡಕೊಂಡಾಗ ಅದಕ್ಕೆ ತನ್ನದೇ ಮಹತ್ವವಿರುತ್ತದೆ.

## 5. ಆರ್ಥಿಕ ಚಟುವಟಿಕೆ ಮತ್ತು ಲಿಂಗ ಸಂಬಂಧಗಳು

ಮಹಿಳೆಯರು ಮೊದಲಿಗೆ ಸಂಪ್ರದಾಯಕವಾಗಿ ಒಪ್ಪಿತಗೊಂಡ ಚಟುವಟಿಕೆಗಳನ್ನೇ ಪ್ರಾರಂಭಿಸಿ ನಂತರದಲ್ಲಿ ಇಟ್ಟಿಗೆ ತಯಾರಿಸುವುದೇ ಮುಂತಾದ ಅಸಂಪ್ರದಾಯಕ, ಅಂದರೆ ಪುರುಷರಿಂದಲೇ ಇದುವರೆಗೂ ನಿರ್ವಹಿಸಲ್ಪಟ್ಟ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಆಸಕ್ತಿ ಮತ್ತು ಆತ್ಮವಿಶ್ವಾಸ ತೋರಿದ್ದಾರೆ. ಆಹಾರ ಸಹಕಾರೀಗಳನ್ನು ನಡೆಸುವುದು, ಹೊಗೆರಹಿತ ಒಲೆಗಳನ್ನು

ಕಟ್ಟುವುದು, ಕಡಿಮೆ ವೆಚ್ಚದ ಶೌಚಾಲಯಗಳನ್ನು ಕಟ್ಟುವುದು ಮುಂತಾದವೂ ಕೂಡ ಈ ಗುಂಪಿಗೆ ಸೇರುತ್ತವೆ. ಕೆಲವು ಮಹಿಳೆಯರು ಅಸಂಪ್ರದಾಯಕ ಕೃಷಿ ಚಟುವಟಿಕೆಗಳಾದ ಉಳುವುದು, ರಾಸಾಯನಿಕ ಗೊಬ್ಬರಗಳನ್ನು ಹಾಕುವುದು ಇತ್ಯಾದಿಗಳಲ್ಲಿ ತೊಡಗಿಕೊಂಡಿದ್ದಾರೆ. ಮಹಿಳೆಯರು ನಿಧಾನಕ್ಕೆ ಪ್ರಸ್ತುತದ ಶ್ರಮ ವಿಭಜನೆಯನ್ನು ಅರ್ಥ ಮಾಡಿಕೊಳ್ಳುತ್ತಾ ಅದರ ಕ್ರಮವನ್ನು ಮುರಿಯಲು ಪ್ರಯತ್ನಿಸುತ್ತಿರುವರಾದರೂ ಬದಲಾವಣೆ ತುಂಬಾ ನಿಧಾನವಾದ ಪ್ರಕ್ರಿಯೆ. ಅದೇನೇಯಾದರೂ ಮಹಿಳೆಯರು ತಮ್ಮ ಕೆಳಮಟ್ಟದ ಸ್ಥಾನಮಾನಗಳನ್ನು ಕಂಡು ಕೊಳ್ಳುತ್ತಾ ಅದರ ಬದಲಾವಣೆಗೆ ನಿರಂತರ ಪ್ರಯತ್ನಿಸುತ್ತಿದ್ದಾರೆ.

ಮಹಿಳೆಯರು ತಮ್ಮ ಕೆಲಸವನ್ನು ಸಾರ್ವಜನಿಕ ಗಮನಕ್ಕೆ ತರಲು, ಪ್ರಚಾರ ಮಾಡಲು ಬಯಸುತ್ತಾರೆ. ಉದಾಹರಣೆಗೆ, ಮಾರ್ಚ್ 8, ಅಂತರರಾಷ್ಟ್ರೀಯ ಮಹಿಳಾ ದಿನದ ಆಚರಣೆಯ ಸಂದರ್ಭದಲ್ಲಿ ಅವರು ಸ್ಥಳೀಯ ಬಜಾರುಗಳನ್ನು ನಿಯೋಜಿಸಲು ಬಯಸಿದ್ದರು. ಇವರಿಂದ ತಮ್ಮ ಕೆಲಸ ಸಾರ್ವಜನಿಕವಾಗಿ ಗುರುತಿಸಲ್ಪಟ್ಟು ಪ್ರಚಾರ ಪಡೆಯುತ್ತದೆ ಎಂಬುದು ಅವರ ಇಂಗಿತವಾಗಿತ್ತು.

ಹಳೆಯ ಸಂಘಗಳು ಇತರ ಹಳ್ಳಿಗಳಲ್ಲಿ ಹೊಸ ಮಹಿಳೆಯರ ಸಂಘಗಳನ್ನು ಪ್ರಾರಂಭಿಸಲು ಸಹಾಯ ಮಾಡುತ್ತವೆ. ಪ್ರತಿ ವರ್ಷ ಮಾರ್ಚ್ 8 ರಂದು ಸಾರ್ವಜನಿಕ ಕಾರ್ಯಕ್ರಮದಲ್ಲಿ 2–3 ಸಾವಿರ ಮಹಿಳೆಯರು ಭಾಗವಹಿಸಿ, ಮಹಿಳೆಯರ ಪ್ರಶ್ನೆಯ ಬಗ್ಗೆ, ಮತ್ತು ತಮ್ಮ ಸ್ತ್ರೀಪರ ಕಾರ್ಯಕ್ರಮಗಳ ಬಗ್ಗೆ ಆತ್ಮ ವಿಶ್ವಾಸದಿಂದ ಮಾತನಾಡುತ್ತಾ ಸಾರ್ವಜನಿಕರಲ್ಲಿ ಇದರ ಬಗ್ಗೆ ಅರಿವು ಮೂಡಿಸಲು ಪ್ರಯತ್ನಿಸುತ್ತಾರೆ. ತಾಲ್ಲೂಕು ಮಟ್ಟದಲ್ಲಿ ಒಂದು ಫೆಡರೇಷನನ್ನು ರಚಿಸಿ ಅದರ ಮೂಲಕ ವಿಸ್ತಾರವಾಗಿ ಮಹಿಳೆಯರ ಸಮಸ್ಯೆಗಳನ್ನು ಎತ್ತಿಕೊಳ್ಳಬೇಕೆನ್ನುವ ಯೋಜನೆ ಸಂಸ್ಥೆಗಿದೆ. ಹೀಗಾಗುವುದರಿಂದ ಫೆಡರೇಷನ್ ತನ್ನ ನಿರಂತರತೆಯನ್ನು ಕಾಪಾಡಿಕೊಳ್ಳಬಹುದೆಂಬುದೂ ಇಲ್ಲಿನ ಇಂಗಿತ.

ಸಂಸ್ಥೆಯು ಮಹಿಳೆಯರಿಗೆ ನಿರ್ವಹಣೆ, ಮಾರಾಟ, ಹಣಕಾಸು ಮತ್ತು ಇತರ ಉತ್ಪಾದನಾ ಸಾಧನಗಳ ನಿಯಂತ್ರಣವನ್ನು ಹೊಂದಿ ಪುರುಷರನ್ನು ಅವಲಂಭಿಸದಿರಲು ಸಹಾಯಕವಾಗುವಂತಹ ತರಬೇತಿಯನ್ನು ನೀಡಿದೆ.

ವಿಷಯಾಧ್ಯಯನದ ಯಾವುದೇ ವಿಮರ್ಶಾತ್ಮಕ ಭಾಗಗಳನ್ನು ಇಲ್ಲಿ ಪ್ರಕಟಿಸಲಾಗಿಲ್ಲ. ವಿವರಣೆಗಳನ್ನಷ್ಟೇ ತೆಗೆದುಕೊಳ್ಳಲಾಗಿದೆ.

ಓದುಗರ ಸಹಾಯದಿಂದಲೇ ಅಂತಹ ವಿಮರ್ಶೆ ಕಟ್ಟಿಕೊಡುವುದು ಮುಖ್ಯವಾಗಿರುವುದರಿಂದ ನಿಮ್ಮ ಅನಿಸಿಕೆಗಳನ್ನು ಇಲ್ಲಿ ಆಹ್ವಾನಿಸುತ್ತೇವೆ.

ಸಂ. ಮಂ.

---



---

# ವಿಶ್ವ ಮಹಿಳಾ ಸಮಾವೇಶಗಳನ್ನು ಕುರಿತು

'ಅಂತರ ರಾಷ್ಟ್ರೀಯ ಮಹಿಳಾ ವರ್ಷ ಯಾರ ನೆನಪಿನಲ್ಲಿದೆ ? ಮುನ್ನೋಟದ ತಂತ್ರಗಳೆಂದರೆ ಏನು ? ಸಂಯುಕ್ತ ರಾಷ್ಟ್ರಗಳ ಮಹಿಳಾ ದಶಕ ಯಾವುದು ?' ಅಂತರ ರಾಷ್ಟ್ರೀಯ ಮಹಿಳಾ ಪತ್ರಿಕೆ 'ಟ್ರಿಬ್ಯೂನ್' ಇಂತಹ ಕೆಲವೊಂದು ಪ್ರಶ್ನೆಗಳನ್ನು ಹಾಕಿಕೊಂಡು ಪರೀಕ್ಷಿಸಿದಾಗ ಇದರ ಬಗ್ಗೆ ತಿಳಿದಿರುವವರು ಕೇವಲ 20% ಕ್ಕಿಂತ ಕಡಿಮೆ. ಇದರ ಬಗ್ಗೆ ನಾವು ತಲೆ ಕೆಡಿಸಿಕೊಳ್ಳಲೇ ಬೇಕಾಗಿದೆ ಏಕೆಂದರೆ, ಮಹಿಳೆಯರು ತಮಗಿಂತ ಹಿಂದೆ ಆಗಿ ಹೋದವರ ಕಷ್ಟಕರ ಕೆಲಸವನ್ನು ಮತ್ತು ಅವರ ಸಾಧನೆಗಳನ್ನು ಅಂಗೀಕರಿಸದೆ ಹೋದರೆ, ಭವಿಷ್ಯತ್ತಿನಲ್ಲಿ ನಮ್ಮ ಹಕ್ಕುಗಳಿಗಾಗಿನ ಹೋರಾಟದಲ್ಲಿ ನಾವು ಅಷ್ಟೊಂದು ಪರಿಣಾಮ ಕಾಣಲಾರೆವು ಎಂಬುದು ನಮ್ಮ ನಂಬಿಕೆ ಎನ್ನುತ್ತದೆ 'ಟ್ರಿಬ್ಯೂನ್'. ಈ ಕಳಕಳಿ ಯತಾರ್ಥವೇ.

1995 ರಲ್ಲಿ ಸಂಯುಕ್ತ ದೇಶಗಳ ನಾಲ್ಕನೇ ವಿಶ್ವ ಮಹಿಳಾ ಸಮಾವೇಶವು ಚೈನಾದ ಬೀಜಿಂಗ್‌ನಲ್ಲಿ ನಡೆಯಲಿದೆ. ಇದರ ಜತೆ ಜತೆಗೆ ಸರ್ಕಾರೇತರ ಗುಂಪುಗಳು 'NGO ಫೋರಂ' ಎನ್ನುವ ಹೆಸರಿನಲ್ಲಿ ಇನ್ನೊಂದು ಸಮಾವೇಶವನ್ನು ನಡೆಸುತ್ತವೆ. ಈ ಹಿನ್ನೆಲೆಯಲ್ಲಿ 1975 ರಿಂದಲೂ ನಡೆಯುತ್ತಾ ಬಂದಿರುವ ಇಂತಹ ಸಮಾವೇಶಗಳ ಕಿರು ಪರಿಚಯ ಮಾಡಿಕೊಳ್ಳುತ್ತಾ ಮುಂಬರುವ ಸಮಾವೇಶದತ್ತ ಒಂದು ನೋಟ ಹರಿಸುವುದು ಇಲ್ಲಿ ಮುಖ್ಯವಾಗುತ್ತದೆ.

ಸಂಯುಕ್ತ ರಾಷ್ಟ್ರಗಳ ಸರ್ವ ಸದಸ್ಯರ ಸಭೆ 1975ನ್ನು ಅಂತರ ರಾಷ್ಟ್ರೀಯ ಮಹಿಳಾ ವರ್ಷವೆಂದು ಸಾರಿತು.

**ವಿಶ್ವ ಸಮಾವೇಶಗಳು**

1979ರ ಜೂನ್ 16 ರಿಂದ ಜುಲೈ 2 ರವರೆಗೆ ಮೆಕ್ಸಿಕೊ ನಗರದಲ್ಲಿ ಸಂಯುಕ್ತ ರಾಷ್ಟ್ರಗಳ ಅಂತರ ಸರ್ಕಾರಗಳ ಮೊಟ್ಟಮೊದಲ ವಿಶ್ವ ಸಮಾವೇಶವು ಜರುಗಿತು. ಈ ಸಮಾವೇಶದ ವಿಷಯಗಳು ಸಮಾನತೆ, ಅಭಿವೃದ್ಧಿ ಮತ್ತು ಶಾಂತಿ. ಎರಡು ಸಾವಿರ ಸರ್ಕಾರೀ ಪ್ರತಿನಿಧಿಗಳ ಸರ್ವಸಮ್ಮತಿಯಿಂದ ಇಲ್ಲಿ ಎರಡು ದಾಖಲೆಗಳನ್ನು ಹೊರತರಲಾಯಿತು :

* ಮಹಿಳೆಯರ ಸಮಾನತೆಯನ್ನು ಕುರಿತ ಮೆಕ್ಸಿಕೋ ಉದ್ಘೋಷಣೆ ಮತ್ತು ಅಭಿವೃದ್ಧಿ ಮತ್ತು ಶಾಂತಿಗಳೆಡೆಗೆ ಮಹಿಳೆಯರ ಕೊಡುಗೆ.
* ಅಂತರ ರಾಷ್ಟ್ರೀಯ ಮಹಿಳಾ ವರ್ಷದ ಉದ್ದೇಶಗಳ ಕಾರ್ಯ ಸಾಧನೆಗೆ ವಿಶ್ವ ಕ್ರಿಯಾ ಯೋಜನೆ.

1975ರ ಅಕ್ಟೋಬರ್‌ನಲ್ಲಿ ಯು ಎನ್, 1976 ರಿಂದ 85 ರವರೆಗಿನ ದಶಕವನ್ನು ಮಹಿಳಾ ದಶಕವೆಂದು ಸಾರಿತು.

1980 ರ ಜುಲೈ 14 ರಿಂದ 29 ರ ವರೆಗೆ ಡೆನ್‌ಮಾರ್ಕಿನ ಕೋಪೆನ್ ಹೇಗನ್‌ನಲ್ಲಿ ಸಂಯುಕ್ತ ರಾಷ್ಟ್ರಗಳು ತಮ್ಮ ಎರಡನೇ ವಿಶ್ವ ಮಹಿಳಾ ಸಮಾವೇಶವನ್ನು ನಡೆಸಿದವು. ಮೊದಲನೇ ವಿಶ್ವ ಸಮಾವೇಶದ ನಂತರದಲ್ಲಿ ಆಗಿರುವ ಮುನ್ನಡೆಯನ್ನು ವಿಶ್ಲೇಷಿಸಿ ದಶಕದ ಉತ್ತರಾರ್ಧಕ್ಕೆ ಸೂಕ್ತ ಕ್ರಿಯಾ ಯೋಜನೆಗಳನ್ನು ರೂಪಿಸುವುದು ಇದರ ಉದ್ದೇಶವಾಗಿತ್ತು. ಇಲ್ಲಿ ದಶಕದ ಮೂರು ವಿಷಯಗಳಾದ ಸಮಾನತೆ, ಅಭಿವೃದ್ಧಿ ಮತ್ತು ಶಾಂತಿಯ ಜತೆಗೆ ಮೂರು ಉಪ ವಿಷಯಗಳಾದ ಶಿಕ್ಷಣ, ಉದ್ಯೋಗ ಮತ್ತು ಆರೋಗ್ಯಗಳನ್ನು ಸೇರ್ಪಡೆ ಮಾಡಲಾಯಿತು. ಇಲ್ಲಿ ಹೊರತರಲಾದ ದಾಖಲೆಯೆಂದರೆ :

* ಕ್ರಿಯಾ ಯೋಜನೆ.

1985ರ ಜುಲೈ 15 ರಿಂದ 26ರ ವರೆಗೆ ಆಫ್ರಿಕಾದ ನೈರೋಬಿಯಲ್ಲಿ ದಶಕದ ಕೊನೆಯ ವಿಶ್ವ ಸಮಾವೇಶವು ಜರುಗಿತು. ಸಮಾವೇಶದಲ್ಲಿ ಸಮಾನತೆ, ಅಭಿವೃದ್ಧಿ ಮತ್ತು ಶಾಂತಿ ಮುಖ್ಯ ವಿಷಯಗಳೂ ಮತ್ತು ಶಿಕ್ಷಣ, ಉದ್ಯೋಗ ಮತ್ತು ಆರೋಗ್ಯ ಉಪ ವಿಷಯಗಳೂ ಆಗಿದ್ದವು. ಸಂಯುಕ್ತ ರಾಷ್ಟ್ರಗಳ ಮಹಿಳಾ ದಶಕದ ಸಾಧನೆಗಳನ್ನು ವಿಶ್ಲೇಷಿಸಲು ಸೇರಿದ್ದ ಎರಡು ಸಾವಿರ ಸರ್ಕಾರೀ ಪ್ರತಿನಿಧಿಗಳ ಸರ್ವ ಸಮ್ಮತಿಯಿಂದ ಹೊರಬಂದ ದಾಖಲೆಯೆಂದರೆ:

* ಕ್ರಿ.ಶ. 2000ಕ್ಕೆ ಮಹಿಳೆಯರ ಮುನ್ನಡೆಗಾಗಿ ಮುನ್ನೋಟದ ತಂತ್ರಗಳು.

1995ರ ಸಪ್ಟೆಂಬರ್ 4 ರಿಂದ 15ರ ವರೆಗೆ ಚೈನಾದ ಬೀಂಜಿಗ್‌ನಲ್ಲಿ ಸಂಯುಕ್ತ ರಾಷ್ಟ್ರಗಳ ನಾಲ್ಕನೇ ವಿಶ್ವ ಸಮಾವೇಶವು ನಡೆಯಲಿದೆ. 'ಸಮಾನತೆ, ಅಭಿವೃದ್ಧಿ ಮತ್ತು ಶಾಂತಿಗಾಗಿ ಕ್ರಿಯೆಗಳು' ಇಲ್ಲಿನ ವಿಷಯವಾಗಿರುತ್ತದೆ. ಈ ವಿಶ್ವ ಸಮಾವೇಶದ ಮುಂದಿಡಲೆಗುವ ಮುಖ್ಯ ದಾಖಲೆಗಳೆಂದರೆ :

* ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತಾದ ವಿಶ್ವ ಸಮೀಕ್ಷೆ.
* ಕ್ರಿಯೆಗಾಗಿ ಸಮಾನ ವೇದಿಕೆ.

## ಸಮಾನಾಂತರ ಸರ್ಕಾರೇತರ ಸಮಾವೇಶಗಳು

ಅಂತರರಾಷ್ಟ್ರೀಯ ಮಹಿಳಾ ವರ್ಷವನ್ನು ಹೊಂದಬೇಕೆನ್ನುವ ಪ್ರಸ್ತಾಪನೆಯನ್ನು ಮೊದಲು ಸಂಯುಕ್ತ ರಾಷ್ಟ್ರಗಳ ಸರ್ವಸದಸ್ಯ ಸಭೆಯ ಮುಂದೆ ತಂದಿದ್ದೇ 'ವಿಮೆನ್ಸ್ ಇಂಟರ್ ನ್ಯಾಷನಲ್ ಡೆಮೊಕ್ರೆಟಿಕ್ ಫೆಡರೇಷನ್' ಎನ್ನುವ ಸರ್ಕಾರೇತರ ಸಂಸ್ಥೆ. ಹೀಗಾಗಿ ಸರ್ಕಾರೇತರ ಸಂಸ್ಥೆಗಳು ಅಂತರಾಷ್ಟ್ರೀಯ ಮಹಿಳಾ ವರ್ಷ ಮತ್ತು ಮಹಿಳಾ ದಶಕದ ಚಟುವಟಿಕೆಗಳ ಮುಂಚೂಣಿಯಲ್ಲಿವೆ.

1975ರ ಜೂನ್ 16 ರಿಂದ ಜುಲೈ 2ರವರೆಗೆ ಮೆಕ್ಸಿಕೊ ನಗರದಲ್ಲಿ ಸರ್ಕಾರೇತರ ಸಂಸ್ಥೆಗಳ ಯೋಜನ ಸಮಿತಿ ಯೋಜಿಸಿದ್ದ ಸರ್ಕಾರೇತರ ಸಮಾವೇಶದಲ್ಲಿ 6000 ಮಹಿಳೆಯರು (ಕೆಲವು ಪುರುಷರು) ಭಾಗವಹಿಸಿದ್ದರು. ಅಂತರರಾಷ್ಟ್ರೀಯ ಮಹಿಳಾ ವರ್ಷದ ಮೂರು ವಿಷಯಗಳಾದ ಸಮಾನತೆ, ಅಭಿವೃದ್ಧಿ ಮತ್ತು ಶಾಂತಿ ದಿನದ ಸರ್ವರ ಭಾಗವಹಿಕೆಯ ಸೆಷನ್‌ಗಳ ಚರ್ಚೆಯ ಕೇಂದ್ರ ವಿಷಯಗಳಾಗಿದ್ದುವು. ಇದರ ಜತೆಗೆಯೇ ಅಸಂಖ್ಯಾತ ಕಾರ್ಯಗಾರಗಳು ನಡೆದಿದ್ದವು. ಸಮಿತಿ ಯೋಜಿಸಿದ್ದ ನೂರು ಕಾರ್ಯಗಾರಗಳಲ್ಲದೆ ಸ್ಥಳದಲ್ಲೇ ತಂತಾನೇ ರೂಪಿತಗೊಂಡ ಮತ್ತೂ ನೂರು ಕಾರ್ಯಗಾರಗಳು ಗ್ರಾಮೀಣ ಮಹಿಳೆಯರ ಸಣ್ಣ ಉದ್ಯೋಗಗಳಿಂದ ಹಿಡಿದು ಮಹಿಳಾ ಗಗನಯಾತ್ರಿಗಳ ತರಬೇತಿಯವರೆಗೆ ಹಲವಾರು ವಿಷಯಗಳನ್ನು ಚರ್ಚೆಗೊಳಪಡಿಸಿದವು. ಮೊದಲೇ ಇಟ್ಟುಕೊಂಡಿದ್ದ ಉದ್ದೇಶಕ್ಕನುಸಾರ ಇಲ್ಲಿ ಯಾವುದೇ ಪ್ರಕಟಣೆಗಳನ್ನು ಹೊರತರಲಿಲ್ಲ. ಅದೇನೇಯಾದರೂ ಇಲ್ಲಿ ಕ್ರಿಯೆಯ ಹೊಸ ಸಾಧ್ಯತೆಗಳು ತೆರೆದುಕೊಂಡವು ಮತ್ತು ಹೊಸ ಕಾರ್ಯಕ್ರಮಗಳು ಮತ್ತು ಸಂಘಗಳು ಹುಟ್ಟಿಕೊಂಡವು.

1980ರ ಜುಲೈ 14 ರಿಂದ 28ರವರೆಗೆ, ಕೋಪನ್ ಹೇಗನ್‌ನಲ್ಲಿ ಸಂಯುಕ್ತ ರಾಷ್ಟ್ರಗಳ ವಿಶ್ವಸಮಾವೇಶಕ್ಕೆ ಸಮಾನಾಂತರವಾಗಿ ಸರ್ಕಾರೇತರ ಸಂಸ್ಥೆಗಳ ಸಮಾವೇಶ ನಡೆಯಿತು. ಇಲ್ಲಿ 8,000 ಮಹಿಳೆಯರೂ ಕೆಲ ಪುರುಷನೂ ಹಾಜರಿದ್ದರು. ಈ ಸಮಾವೇಶದ ವಿಷಯಗಳು ವಿಶ್ವಸಮಾವೇಶದವೇ ಆಗಿದ್ದರೂ ಭಾಗವಹಿಸಿದ್ದವರು ಇನ್ನೂ ಅಸಂಖ್ಯಾತ ವಿಷಯಗಳನ್ನು ಕುರಿತು ಚರ್ಚಿಸಿದರು. ಉದಾ : ಸ್ತ್ರೀ ಲೈಂಗಿಕ ದಾಸ್ಯ, ಮನೆ ಕೆಲಸಕ್ಕೆ ಸಂಬಳ, ಸ್ತ್ರೀವಾದ, ಯೋಗ್ಯ ತಾಂತ್ರಿಕತೆ, ಮಹಿಳಾ ಅಧ್ಯಯನ ಮತ್ತು ಇನ್ನೂ ಹತ್ತು ಹಲವು. 1975 ರಲ್ಲಿಯಂತೆಯೇ ಇಲ್ಲಿಯೂ ಯಾವ ಪ್ರಕಟಣೆಗಳನ್ನು ಹೊರತರಲಿಲ್ಲ. ಆದರೆ ಈ ಸಮಾವೇಶವು ಬೆಳೆಯುತ್ತಿರುವ ಅಂತರರಾಷ್ಟ್ರೀಯ ಮಹಿಳಾ ಚಳವಳಿಗೆ ಮತ್ತು ವಿಶ್ವದಾದ್ಯಂತ ಹೊಸ ಸಂಪರ್ಕ ಜಾಲಗಳ ಬೆಳವಣಿಗೆಗೆ ಮೌಲಿಕ ಕೊಡುಗೆ ನೀಡಿತು.

1985ರ ಜುಲೈ 10 ರಿಂದ 19ರವರೆಗೆ ಸಮಾನಾಂತರ ಸರ್ಕಾರೇತರ ಸಮಾವೇಶವು ನೈರೋಬಿ ವಿಶ್ವವಿದಾಲಯದಲ್ಲಿ ನಡೆಯಿತು. ಇದರಲ್ಲಿ ಸುಮಾರು 15,000 ಮಹಿಳೆಯರು ಭಾಗವಹಿಸಿದ್ದರು. ಈ ಬಾರಿ ಕಾರ್ಯಗಾರಗಳು 1400ಕ್ಕೂ ಹೆಚ್ಚಿದ್ದವು. ಪ್ರದರ್ಶನಗಳು, ವಸ್ತುಪ್ರದರ್ಶನಗಳು ಮತ್ತು ಗುಂಪು ಚರ್ಚೆಗಳು, ಅಂತರರಾಷ್ಟ್ರೀಯ ಚಲನಚಿತ್ರ ಮತ್ತು ವಿಡಿಯೋ ಉತ್ಸವಗಳು, ಒಂದು ಶಾಂತಿಯ ಟೆಂಟು ಮತ್ತು

ಕರಕುಶಲ ಬಜಾರ್ ಇವೆಲ್ಲ ಪೂರಕ ಅಂಗಗಳಾಗಿದ್ದವು. ಪುನಃ ಇಲ್ಲಿನ ವಿಷಯಗಳು ಯುಎನ್ ವಿಶ್ವ ಸಮಾವೇಶದ್ದವೇ ಆಗಿದ್ದರೂ ಮಹಿಳೆ-ಕಾನೂನು ಮತ್ತು ಅಭಿವೃದ್ಧಿ, ಲೆಸ್‌ಬಿಯನ್ನರ ಹಕ್ಕುಗಳು ಮತ್ತು ಸಂಶೋಧನಾ ವಿಷಯಗಳು, ಮತ್ತು ಕಲೆ-ಸಂಗೀತಗಳಲ್ಲಿ ಮಹಿಳೆಯರು ಇತ್ಯಾದಿ ವಿಷಯಗಳೆಲ್ಲಾ ಒಳಗೊಳ್ಳುವಂತೆ ವಿಸ್ತೃತಗೊಳಿಸಲಾಗಿತ್ತು.

ಫೋರಂ-85 ಯಾವುದೇ ಪ್ರಕಟಣೆಗಳನ್ನು ಹೊರತರಲಿಲ್ಲ. ಆದರೆ ಅನೇಕಾನೇಕ ಹೊಸ ಸಂಸ್ಥೆಗಳು ಮತ್ತು ಸಂಪರ್ಕಜಾಲಗಳಿಗೆ ಚಾಲನೆ ಕೊಟ್ಟಿತು. ಮತ್ತು ಮಹಿಳಾ ಧೋರಣೆಗಳಿಗೆ ಅಂತರರಾಷ್ಟ್ರೀಯ ವೇದಿಕೆಯನ್ನು ಒದಗಿಸಿಕೊಟ್ಟಿತು.

1995ರ ಆಗಸ್ಟ್ 31ರಿಂದ ಸೆಪ್ಟೆಂಬರ್ 12ರವರೆಗೆ ಚೈನಾದ ಬೀಜಿಂಗ್‌ನಲ್ಲಿ ಇನ್ನೊಂದು ಸರ್ಕಾರೇತರ ಫೋರಂ (ಸಮಾವೇಶ) ನಡೆಯಲಿದ್ದು ಅದಕ್ಕೆ ಪೂರ್ವ ಸಿದ್ಧತೆಗಳು ನಡೆಯುತ್ತಿವೆ.

### ನಾಲ್ಕನೇ ವಿಶ್ವ ಮಹಿಳಾ ಸಮಾವೇಶ ಮತ್ತು ಅದರ ಸಂಯೋಜನೆ (ಅಂತರ ಸರಕಾರಗಳದ್ದು)

ಮಹಿಳೆಯರ ಸ್ಥಾನಮಾನವನ್ನು ಕುರಿತ ಸಂಯುಕ್ತ ರಾಷ್ಟ್ರಗಳ ಕಮೀಷನ್ನು ನಾಲ್ಕನೇ ವಿಶ್ವ ಮಹಿಳಾ ಸಿದ್ಧತಾ ಸಮಿತಿಯಾಗಿ ಕಾರ್ಯ ನಿರ್ವಹಿಸುತ್ತದೆ. ಇದು, ನ್ಯೂಯಾರ್ಕ್‌ನಲ್ಲಿ ರಚಿಸಲಾಗಿರುವ ಸಮಾವೇಶದ ಕಾರ್ಯದರ್ಶಿ ಕಛೇರಿ ನಡೆಸುತ್ತಿರುವ ಪೂರ್ವ ಸಿದ್ಧತೆಗಳನ್ನು ವಿಮರ್ಶಿಸುತ್ತದೆ ಮತ್ತು ಸಿದ್ಧತಾ ಪ್ರಕ್ರಿಯೆಯ ಭಾಗವಾಗಿ ಶಿಫಾರಸ್ಸುಗಳನ್ನು, ನಿರ್ಣಯಗಳನ್ನು ಮಾಡುತ್ತದೆ.

ವಿಶ್ವ ಸಮಾವೇಶದ ಹಿಂದಿನ ವರ್ಷಗಳಲ್ಲಿ ಈ ಸಿದ್ಧತಾ ಸಮಿತಿ ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ದೀರ್ಘ ಸಭೆ ಸೇರುತ್ತದೆ. 1994ರ ಜನವರಿಯಲ್ಲಿ ಒಂದು ಇಂಟರ್-ಸೆಷನರಿ ಸಭೆ ಸೇರಿ 1995ರ ವಿಶ್ವ ಸಮಾವೇಶದ ದಾಖಲೆಯಾದ 'ಸಮಾನ ಕ್ರಿಯೆಗಾಗಿ ಯೋಜನೆ'ಯ ಮೇಲೆ ಕೆಲಸ ಮಾಡುತ್ತದೆ.

ಈ ಸಿದ್ಧತಾ ಸಮಿತಿಯು ವಿಶ್ವ ಸಮಾವೇಶದ ಸಂಬಂಧದಲ್ಲಿ ತೆಗೆದುಕೊಂಡ ತೀರ್ಮಾನಗಳನ್ನು ಸಂಯುಕ್ತ ರಾಷ್ಟ್ರಗಳ ಸರ್ವಸದಸ್ಯರ ಸಭೆಯ ಮುಂದೆ ಪರಾಮರ್ಶನೆಗಾಗಿ ಇಡುತ್ತದೆ.

### ಪ್ರಾದೇಶಿಕ ಮಟ್ಟದಲ್ಲಿ ಪ್ಲಾನಿಂಗ್

ಸಂಯುಕ್ತ ರಾಷ್ಟ್ರಗಳ ಪ್ರಾದೇಶಿಕ ಕಮಿಷನ್ನುಗಳು, 1995ರ ಬೀಜಿಂಗ್ ವಿಶ್ವ ಮಹಿಳಾ ಸಮಾವೇಶಕ್ಕೆ ಪೂರ್ವ ಸಿದ್ಧತೆಗಾಗಿ 1994 ರಲ್ಲಿ ಅಂತರ ಸರ್ಕಾರಗಳ ಪ್ರಾದೇಶಿಕ ಸಿದ್ಧತಾ ಸಭೆಗಳನ್ನು ಏರ್ಪಡಿಸುತ್ತವೆ. ಅರ್ಜೆಂಟೈನಾದಲ್ಲಿ ECLAC (ಲ್ಯಾಟಿನ್ ಅಮೆರಿಕಾ ಮತ್ತು ಕೆರೆಬಿಯನ್‌ಗಳ ಆರ್ಥಿಕ ಕಮಿಷನ್ನು) ನಡೆಸುವ ಪೂರ್ವ ಸಿದ್ಧತಾ ಸಭೆ ಮಹಿಳೆಯರ ರಾಜಕೀಯ ಭಾಗವಹಿಕೆ ಮತ್ತು ಮಹಿಳೆಯರ ಮೇಲಿನ ಕ್ರೌರ್ಯಗಳನ್ನು ಕೇಂದ್ರವಾಗಿಸಿಕೊಂಡರೆ ಥೈಲಾಂಡಿನ ESCAP (ಏಷಿಯಾ ಮತ್ತು ಫೆಸಿಫಿಕ್‌ಗಳ ಆರ್ಥಿಕ ಮತ್ತು ಸಾಮಾಜಿಕ ಕಮಿಷನ್ನು) ಕಾನೂನು, ಶಿಕ್ಷಣ ಮತ್ತು ಅಭಿವೃದ್ಧಿ ಯೋಜನೆಗಳತ್ತ ಕೇಂದ್ರೀಕರಿಸುತ್ತದೆ. ಸೆನೆಗಲ್‌ನ ECA (ಆಫ್ರಿಕಾದ ಆರ್ಥಿಕ ಕಮಿಷನ್ನು) ಮಹಿಳಾ ಉದ್ಯಮಗಳನ್ನೇ ಕೇಂದ್ರ ವಿಷಯವಾಗಿ ತೆಗೆದುಕೊಳ್ಳುತ್ತದೆ; ESCWA (ಪಶ್ಚಿಮ ಏಷಿಯಾದ ಅರ್ಥಿಕ ಮತ್ತು ಸಾಮಾಜಿಕ ಕಮಿಷನ್) ಅರ್ಥಿಕತೆಗಳ ಮರು ರಚನೆಯತ್ತ ಗಮನ ಕೇಂದ್ರಿಕರಿಸುತ್ತದೆ; ECE (ಯೂರೋಪಿನ ಅರ್ಥಿಕ ಕಮಿಷನ್ನು) ಪೂರ್ವ ಸಿದ್ಧತಾ ಸಭೆ ನಡೆಸಬೇಕೇ ಬೇಡವೇ ಎನ್ನುವ ಬಗ್ಗೆ ಇನ್ನೂ ತೀರ್ಮಾನ ಕೈಗೊಂಡಿಲ್ಲ.

### ಸಮಾನಾಂತರ ಸರ್ಕಾರೇತರ ಸಮಾವೇಶ ಮತ್ತು ಸಂಯೋಜನೆ

ಒಂದು ಸರ್ಕಾರೇತರ ಸಂಸ್ಥೆಗಳ ಪ್ಲಾನಿಂಗ್ ಸಮಿತಿಯು ಬೀಜಿಂಗ್‌ನ ಸರ್ಕಾರೇತರ ಫೋರಂ (ಸಮಾವೇಶ) ಅನ್ನು ನಿಯೋಜಿಸುತ್ತದೆ. ಇದು ECOSCO (CONGO) ಜತೆ ಸಮಾಲೋಚನೆ ನಡೆಸುತ್ತದೆ. 63 ಅಂತರ ರಾಷ್ಟ್ರೀಯ ಮಹಿಳಾ ಸಂಸ್ಥೆಗಳು ಈ ಪ್ಲಾನಿಂಗ್ ಸಮಿತಿಯಲ್ಲಿವೆ, ಜತೆಗೆ ಆಲ್ ಚೈನಾ ವಿಮೆನ್ಸ್ ಫೆಡರೇಷನ್ (ACWF) ಇದೆ. ಜಿನೇವಾ, ವಿಯನ್ನಾ ಮತ್ತು ನ್ಯೂಯಾರ್ಕ್‌ಗಳಲ್ಲಿ ವ್ಯವಸ್ಥಿತವಾಗಿ ಸಭೆ ಸೇರುವ ಮಹಿಳೆಯರ ಸ್ಥಾನಮಾನವನ್ನು ಕುರಿತ ಸರ್ಕಾರೇತರ ಸಂಸ್ಥೆಗಳ ಸಮಿತಿಯಲ್ಲೂ ಇವು ಭಾಗವಹಿಸುತ್ತವೆ. ಅಂತರ ಸರ್ಕಾರಗಳ ವಿಶ್ವ ಸಮಾವೇಶದ ಶಿಕ್ಷಣ ಸಮಿತಿ ಸಭೆ ಸೇರುವುದಕ್ಕೆ ಸ್ವಲ್ಪ ಮುಂಚಿತವಾಗಿ

ವರ್ಷಕ್ಕೊಮ್ಮೆ ಈ ಪ್ಲಾನಿಂಗ್ ಸಮಿತಿಗಳು ಎರಡು ದಿನದ ಸಮಾಲೋಚನಾ ಸಭೆ ಸೇರುತ್ತವೆ. ಇಂತಹ ಮುಂದಿನ ಸಭೆ 1994 ರ ಮಾರ್ಚ್‌ನಲ್ಲಿ ನ್ಯೂಯಾರ್ಕ್‌ನಲ್ಲಿ ಸೇರಲಿದೆ.

ಸರ್ಕಾರೇತರ ಸಂಸ್ಥೆಗಳ ಪ್ಲಾನಿಂಗ್ ಸಮಿತಿಯು, 1994ರಾದ್ಯಂತ ನಡೆಯುವ ಪ್ರಾದೇಶಿಕ ಸಿದ್ಧತಾ ಸಭೆಗಳು ಮತ್ತು 1995 ರ ಸರ್ಕಾರೇತರ ಸಮಾವೇಶಗಳಿಗೆ ಒಂದು ಸ್ವರೂಪವನ್ನು ತಂದುಕೊಡಲು ಒಂದು ಸಹಾಯಕ ಸಮಿತಿಯನ್ನು ರಚಿಸಿದೆ. ಈ ಸಮಿತಿಯು ಈ ಕೆಲ ಅಂಶಗಳ ಯೋಜನೆಯ ಮೇಲ್ವಿಚಾರಣೆ ನಡೆಸುತ್ತದೆ :

—ಸಭೆಯ ಮುಂಚಿನ ಸಮಾಲೋಚನೆಗಳು

—ವಿಶ್ವ ಸಮಾವೇಶ ವಿಷಯಗಳ ಸರ್ವ ಭಾಗವಹಿಕೆಯ ಸೆಷನ್‌ಗಳು.

—ಯುಎನ್ ವಿಶ್ವ ಸಮಾವೇಶದ ಬಗ್ಗೆ ದಿನ ನಿತ್ಯದ ಮಾಹಿತಿ

—ಒಂದು ದಿನ ಪತ್ರಿಕೆ

—ಗುಂಪುಗಳ ಮತ್ತು ವ್ಯಕ್ತಿಗಳ ಚಟುವಟಿಕೆಗಳಿಗೆ ಸೌಲಭ್ಯಗಳು

—ಇಂಗ್ಲಿಷ್, ಫ್ರೆಂಚ್ ಮತ್ತು ಸ್ಪಾನಿಷ್ ಭಾಷೆಗಳಿಗೆ ಒಟ್ಟೊಟ್ಟಿಗೆ ಭಾಷಾಂತರ.

—ಜಾಗತಿಕ ಮಾಹಿತಿ ನೀಡಿಕೆ ಕಾರ್ಯಕ್ರಮ.

ಸರ್ಕಾರೇತರ ಸಂಸ್ಥೆಗಳ ಪ್ಲಾನಿಂಗ್ ಸಮಿತಿಯು ಒಬ್ಬ ಸಂಯೋಜಕಿಯನ್ನು ನೇಮಿಸಿದೆ. ಮರ್ಲಿನ್ ಪರೆನ್‌ಸಾನ್ ಎಂಬ ಹೆಸರಿನ ಈಕೆಯ ಕೆಲಸಗಳೆಂದರೆ : ಆತಿಥೇಯ ದೇಶ ಚೀನಾದ ಜತೆ ನಿರಂತರ ಸಂಪರ್ಕವಿರಿಸಿಕೊಳ್ಳುವುದು, ವಿಶ್ವದಾದ್ಯಂತ ಮಾಹಿತಿ ಹಂಚಿಕೆಗೆ ಸಹಾಯ ಮಾಡುವುದು, ಕಾರ್ಯಾಗಾರಗಳಿಗಾಗಿ ಬರುವ ಕೋರಿಕೆ ಮತ್ತು ರೆಜಿಸ್ಟ್ರೇಷನ್‌ಗಳಿಗಾಗಿ ಸೂಕ್ತ ವ್ಯವಸ್ಥೆ ಮಾಡುವುದು. ಈಕೆಗೆ ಸಹಾಯಕವಾಗಿ ಒಂದು ಸಣ್ಣ ಸಿಬ್ಬಂದಿ ವರ್ಗವಿರುತ್ತದೆ. ಪ್ಲಾನಿಂಗ್ ಸಮಿತಿಯ ವಕ್ತಾರಂತಿರಲು ಒಬ್ಬ ನಿಯೋಜಕಿಯಿದ್ದು ಆಕೆ ಸಂಯುಕ್ತ ರಾಷ್ಟ್ರದೊಂದಿಗೆ, ಸರಕಾರಗಳೊಂದಿಗೆ, ದಾನಿ ಸಂಸ್ಥೆಗಳೊಂದಿಗೆ ವ್ಯವಹರಿಸುತ್ತಾರೆ.

**ಯುಎನ್ ವಿಶ್ವ ಸಮಾವೇಶದಲ್ಲಿ ಭಾಗವಹಿಕೆ**

ಯುಎನ್‌ನ ಸದಸ್ಯ ರಾಷ್ಟ್ರಗಳು ಮಾತ್ರ ಇಲ್ಲಿ ಭಾಗವಹಿಸಬಹುದು. ಇಲ್ಲಿ 181 ರಾಷ್ಟ್ರಗಳಿವೆ.

ECOSCO ದೊಂದಿಗೆ ಸಮಾಲೋಚನಾ ಸ್ಥಾನವನ್ನು ಹೊಂದಿರುವ ಸರ್ಕಾರೇತರ ಸಂಸ್ಥೆಗಳು ಕೆಲವು ವೀಕ್ಷಕರನ್ನು ಮಾತ್ರ ಇಲ್ಲಿಗೆ ಕಳುಹಿಸಬಹುದು.

ECOSCO ದೊಂದಿಗೆ ಸಮಾಲೋಚನಾ ಸ್ಥಾನವನ್ನು ಹೊಂದಿಲ್ಲದ ಸರ್ಕಾರೇತರ ಸಂಸ್ಥೆಗಳಿಗೆ ಇಲ್ಲಿ ಅವಕಾಶ ಸಿಗಬೇಕೆನ್ನುವ ಬಗ್ಗೆ ಸದಸ್ಯ ರಾಷ್ಟ್ರಗಳು ಮತ್ತು ಸರ್ಕಾರೇತರ ಸಂಸ್ಥೆಗಳು ನಡೆಸಿದ ಪ್ರಯತ್ನದ ಫಲವಾಗಿ, ಮಹಿಳೆಯರ ಸ್ಥಾನಮಾನದೆಡೆಗಿನ ಸಂಯುಕ್ತ ರಾಷ್ಟ್ರಗಳ ಕಮಿಷನ್ನು 1993 ನೇ ಮಾರ್ಚ್‌ನ ಏಯನ್ನಾದ ತನ್ನ 37ನೇ ಅಧಿವೇಶನದಲ್ಲಿ, ಸಾಧ್ಯವಿರುವ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳನ್ನೆಲ್ಲಾ ಒಳಗೊಳ್ಳಿಸುವಂತೆ ಸರ್ಕಾರಗಳನ್ನು ಆಹ್ವಾನಿಸಿತು. ಜತೆಗೆ ಸಿದ್ಧತಾ ಚಟುವಟಿಕೆಗಳಲ್ಲಿ ಭಾಗವಹಿಸುವ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳನ್ನೆಲ್ಲಾ ವಿಶ್ವ ಸಮಾವೇಶದ ಭಾಗವಹಿಕೆಗೆ ಅರ್ಹರಾಗಿಸಬೇಕೆಂದು ಸಮಾವೇಶದ ಸಕ್ರೆಟರಿ ಜನರಲ್ ಅವರನ್ನು ಕೇಳಿಕೊಂಡಿತು.

ಸರ್ಕಾರೇತರ ಸಂಸ್ಥೆಗಳು ತಮ್ಮ ಪ್ರದೇಶಗಳಲ್ಲಿ ಸಂಯುಕ್ತ ರಾಷ್ಟ್ರಗಳ ಪ್ರಾದೇಶಿಕ ಕಮಿಷನ್ನುಗಳನ್ನು ಸಂಪರ್ಕಿಸುತ್ತಾ, ರಾಷ್ಟ್ರೀಯ ಮತ್ತು ಪ್ರಾದೇಶಿಕ ಮಟ್ಟಗಳಲ್ಲಿನ ಪೂರ್ವಸಿದ್ಧತಾ ಚಟುವಟಿಕೆಗಳಲ್ಲಿ ಒಳಗೊಳ್ಳಿಸಿಕೊಳ್ಳಲು ಮಾಹಿತಿ ಪಡೆಯಬೇಕು.

**ಸರ್ಕಾರೇತರ ಸಮಾನಾಂತರ ಸಮಾವೇಶದಲ್ಲಿ ಭಾಗವಹಿಕೆ :**

1995ರ ಬೀಜಿಂಗ್‌ನ ಈ ಸಮಾವೇಶ ಪ್ರತಿಯೊಬ್ಬರಿಗೂ ತೆರೆದಿರುತ್ತದೆ, ಹಿಂದಿನ ಸಮಾವೇಶಗಳಂತೆಯೇ.

ಹಿಂದಿನ ಸಮಾವೇಶಗಳಲ್ಲಿ ಕೆಲವರು ತಮ್ಮ ಸಂಸ್ಥೆಯನ್ನು ಪ್ರತಿನಿಧಿಸಿದರೆ ಇನ್ನು ಕೆಲವರು ವಯುಕ್ತಿಕವಾಗಿ ಭಾಗವಹಿಸಿದ್ದರು. ಕೆಲವರ ಖರ್ಚುವೆಚ್ಚಗಳನ್ನು ಸಂಸ್ಥೆಗಳು ವಹಿಸಿದ್ದರೆ, ಕೆಲವರು ಸ್ವಂತ ಖರ್ಚಿನಲ್ಲಿ ಭಾಗವಹಿಸಿದ್ದರು. ಸರ್ಕಾರೇತರ ಸಮಾವೇಶಗಳು ವಿಶ್ವ ಸಮಾವೇಶದ ಜತೆ ಜತೆಗೆಯೇ ಅದೇ ಸಮಯದಲ್ಲಿ ನಡೆಯುತ್ತವೆ. ಸಮಾವೇಶದ ಸ್ಥಳವೂ ಅದಕ್ಕೆ ಹತ್ತಿರ

ವಾಗಿದ್ದು ಎರಡರ ನಡುವೆ ಹೋಗಿ ಬರುವಿಕೆಗೆ ಮತ್ತು ಪರಸ್ಪರ ಆಗುಹೋಗುಗಳ ಬಗ್ಗೆ ತಿಳಿದುಕೊಳ್ಳಲು ಸಹಾಯಪಾಗುತ್ತದೆ. 1975ರ ಸರ್ಕಾರೇತರ ಸಮಾವೇಶವು ಮೆಕ್ಸಿಕೋ ನಗರದ ಮೆಡಿಕಲ್ ಸೆಂಟರ್ ನಲ್ಲಿಯೂ, 1980ರ ಕೋಪನ್ ಹೇಗನ್ ಸಮಾವೇಶವು ದೊಡ್ಡ ಕಟ್ಟಡಗಳು, ಪಿತ್ತಲುಗಳು, ಕ್ಯಾಂಟೀನುಗಳು, ಸಣ್ಣ, ದೊಡ್ಡ ತರಗತಿ ಕೊಠಡಿಗಳನ್ನು ಹೊಂದಿದ್ದ ಅಮಾಗರ್ ವಿಶ್ವವಿದ್ಯಾಲಯದಲ್ಲಿಯೂ, 19885ರ ನೈರೋಬಿ ಸಮಾವೇಶವು ವಿಸ್ತಾರವಾದ ಸುಂದರ ನೈರೋಬಿ ವಿಶ್ವವಿದ್ಯಾಲಯದಲ್ಲಿಯೂ ಏರ್ಪಾಡಾಗಿದ್ದವು.

**ವಿಶ್ವ ಸಮಾವೇಶಕ್ಕೆ ಸಿದ್ಧತೆಗಳು**

ಮಹಿಳೆಯರ ಸ್ಥಾನಮಾನದೆಡೆಗಿನ ಸಂಯುಕ್ತ ರಾಷ್ಟ್ರಗಳ ಕಮಿಷನ್ನು ವಿಯನ್ನಾದಲ್ಲಿ 1991, 1992, 1993ರ ಮಾರ್ಚಿ ತಿಂಗಳಿನಲ್ಲಿ ತನ್ನ 35, 36 ಮತ್ತು 37ನೇ ಅಧಿವೇಶನಗಳನ್ನು ಕರೆದಿತ್ತು. 35ನೇ ಅಧಿವೇಶನ ದಲ್ಲಿ, 1995ರಲ್ಲಿ ನಾಲ್ಕನೇ ವಿಶ್ವ ಸಮಾವೇಶನನ್ನು ನಡೆಸಬೇಕೆನ್ನುವುದರ ಬಗ್ಗೆ ಪ್ರಸ್ತಾಪನೆಯನ್ನು ಮಾಡಿ ತನ್ನ ಈ ಶಿಫಾರಸನ್ನು ECOSOC ಮತ್ತು ಸರ್ವಸದಸ್ಯ ಸಭೆಗಳ ಮುಂದಿಟ್ಟಿತು. 1991ನೇ ಅಕ್ಟೋಬರ್‌ನಲ್ಲಿ ಇದು ಅಧಿಕೃತವಾಗಿ ಸ್ವೀಕೃತಗೊಂಡಿತು. 36ನೇ ಅಧಿವೇಶದಿಂದ ಸಮಾವೇಶದ ಸಿದ್ಧತೆಗಳ ಬಗ್ಗೆ ಚರ್ಚೆಯನ್ನು ಪ್ರಾರಂಭಿಸಿತು. 38ನೇ ಅಧಿವೇಶನ 1994ರ ಮಾರ್ಚಿನಲ್ಲಿ ನ್ಯೂಯಾರ್ಕಿನಲ್ಲಿ ನಡೆಯುವುದು.

ವಿಶ್ವ ಸಮಾವೇಶದ ತಯಾರಿಯಲ್ಲಿ ನೇರವಾಗಿ ಒಳಗೊಂಡಿರುವ ಮೂರು ಪ್ರಾಥಮಿಕ ಅಂಗಗಳಿವೆ;

* ಮಹಿಳೆಯರ ಸ್ಥಾನಮಾನದೆಡೆಗಿನ ಸಂಯುಕ್ತ ರಾಷ್ಟ್ರಗಳ ಕಮಿಷನ್ನು (UN/CSW)
* ಸಂಯುಕ್ತ ರಾಷ್ಟ್ರಗಳ ಮಹಿಳಾ ಮುನ್ನಡೆಗಾಗಿನ ವಿಭಾಗ (UN/DAW)
* ಸಮಾವೇಶದ ಕಾರ್ಯದರ್ಶಿ ಕಛೇರಿ.

ಮಹಿಳಾ ಮುನ್ನಡೆಗಾಗಿನ ವಿಭಾಗ ಮಹಿಳೆಯರ ಸ್ಥಾನಮಾನದ ಕಮಿಷನ್ನಿಗೆ ಕಾರ್ಯದರ್ಶಿ ಕಚೇರಿಯಾಗಿ ಕೆಲಸ ಮಾಡುತ್ತದೆ. ಮಹಿಳೆಯರ ಸ್ಥಾನಮಾನದ ಕಮಿಷನ್ನು ವಿಶ್ವಸಮಾವೇಶದ ಪೂರ್ವಸಿದ್ಧತಾ ಸಮಿತಿಯಾಗಿ ಕಾರ್ಯ ನಿರ್ವಹಿಸುತ್ತದೆ. ಸಮಾವೇಶ ಕಾರ್ಯದರ್ಶಿ ಕಚೇರಿ ರೂಪುಗೊಳ್ಳುವಿಕೆ ಮತ್ತು ಅದರ ಸಿಬ್ಬಂದಿ ರಚನೆಯು ಸಮಾವೇಶದಿಂದ ಸಮಾವೇಶಕ್ಕೆ ಭಿನ್ನವಾಗಿರುತ್ತದೆ. ಉದಾ : 1980ರ ಸಮಾವೇಶಕ್ಕೆ ಬಂದು ಪ್ರತ್ಯೇಕ ಕಾರ್ಯದರ್ಶಿ ಕಚೇರಿಯು ತನ್ನದೇ ಸಿಬ್ಬಂದಿಯನ್ನುಮತ್ತು ಸ್ಥಳವನ್ನು ಹೊಂದಿ ನ್ಯೂಯಾರ್ಕಿನಲ್ಲಿ ರಚಿತವಾಗಿತ್ತು. 1985ರ ಸಮಾವೇಶದಲ್ಲಿ ಇದು ವಿಯನ್ನಾದಲ್ಲಿ ಮಹಿಳಾ ಮುನ್ನಡೆಗಾಗಿನ ವಿಭಾಗದೊಳಗೇ ಇದ್ದು ಅದೇ ಸಿಬ್ಬಂದಿಯನ್ನೂ ಒದಗಿಸಿತ್ತು. 1995ರ ಸಮಾವೇಶಕ್ಕೆ ಕಾರ್ಯದರ್ಶಿ ಕಛೇರಿಯು ನ್ಯೂಯಾರ್ಕಿನಲ್ಲಿ ತನ್ನದೇ ಸ್ಥಳ ಮತ್ತು ಸಿಬ್ಬಂದಿಯನ್ನು ಹೊಂದಿರುವುದರಿಂದ ಮಹಿಳಾ ಮುನ್ನಡೆಗಾಗಿನ ವಿಭಾಗವು 1993 ಜುಲೈನಲ್ಲಿ ನ್ಯೂಯಾರ್ಕಿಗೆ ಹೋಗಿದ್ದು ಕಾರ್ಯದರ್ಶಿ ಕಛೇರಿಯ ಜತೆ ನಿಕಟ ಸಹಕಾರದಿಂದ ಕೆಲಸ ಮಾಡುತ್ತದೆ.

**ಸರ್ಕಾರೇತರ ಸಮಾವೇಶಗಳಿಗೆ ಸಿದ್ಧತೆ**

ಸಂಯುಕ್ತ ರಾಷ್ಟ್ರಗಳು ವಿಶ್ವ ಸಮಾವೇಶಗಳ ಬಗ್ಗೆ ಚರ್ಚೆಯನ್ನು ಪ್ರಾರಂಭಿಸುತ್ತಿದ್ದಂತೆಯೇ CONGOದ ಪ್ರತಿನಿಧಿತ್ವ ಹೊಂದಿರುವ ಸರ್ಕಾರೇತರ ಸಂಸ್ಥೆಗಳೂ ಸಮಾನಾಂತರ ಸರ್ಕಾರೇತರ ಸಮಾವೇಶಕ್ಕೆ ಸಿದ್ಧತೆ ಪ್ರಾರಂಭಿಸಿದವು. ಸಂಯೋಜಕಿಯ ನೇಮಕ, ಸಹಾಯಕ ಸಮಿತಿಯ ರಚನೆ, ಪ್ರಾದೇಶಿಕ ಮಟ್ಟದ ಚಟುವಟಿಕೆಗಳು ಪ್ರಾರಂಭವಾದವು.

1993ರಲ್ಲಿ ನಡೆದ ಸರ್ಕಾರೇತರ ಸಂಸ್ಥೆಗಳ ಪೂರ್ವ ಸಿದ್ಧತಾ ಸಮಿತಿಯ ಸಭೆಯಲ್ಲಿ ನೂರಕ್ಕೂ ಹೆಚ್ಚು ಮಹಿಳೆಯರು ಪ್ರತಿನಿಧಿಸಿದ್ದು, ಇವರು ವಿಯನ್ನಾ, ಜಿನೇವಾ, ನ್ಯೂಯಾರ್ಕ್ ಸರ್ಕಾರೇತರ ಸಂಸ್ಥೆಗಳ ಮಹಿಳೆಯರ ಸ್ಥಾನಮಾನದ ಸಮಿತಿಯಲ್ಲಿ ಕ್ರಿಯಾಶೀಲವಾಗಿರುವ ಸಂಸ್ಥೆಗಳು, ಚೈನಾದ ಮಹಿಳಾ ಗುಂಪುಗಳು, ಪತ್ರಿಕೋದ್ಯಮಿಗಳು, ಸಂಯುಕ್ತ ರಾಷ್ಟ್ರಗಳ ಮಹಿಳಾ ದಶಕದ ಸಮಯದಲ್ಲಿ ಹುಟ್ಟಿಕೊಂಡ ಅನೇಕ ಅಂತರ ರಾಷ್ಟ್ರೀಯ ಸಂಸ್ಥೆಗಳು ಮುಂತಾದವುಗಳಿಂದ ಬಂದವರಾಗಿದ್ದರು. ಇಲ್ಲಿ ಹಲವಾರು ಕ್ರಿಯಾ ಸಮಿತಿಗಳನ್ನು ರಚಿಸಲಾಯಿತು.

UN/CSW ಮುಂದಿಡಲು ನಿರ್ಣಯಗಳನ್ನು ರಚಿಸುವುದರ ಜತೆಗೆ ಪ್ರಾದೇಶಿಕ ಮಟ್ಟದಲ್ಲಿನ ಚಟುವಟಿಕೆಗಳ ಬಗ್ಗೆಯೂ ಚರ್ಚಿಸಲಾಯಿತು. ಸಹಾಯಕ ಸಮಿತಿಯಲ್ಲಿ

ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ ವಿವಿಧ ಸಂಯೋಜಕಿಯರು ಮತ್ತು ಪ್ರಾದೇಶಿಕ ಮತ್ತು ಅಂತರರಾಷ್ಟ್ರೀಯ ಸಂಪರ್ಕ ಜಾಲಗಳ ಪ್ರತಿನಿಧಿಗಳೂ ಸೇರಿರಬೇಕೆಂದು ಒತ್ತಾಯಿಸಲಾಯಿತು. ಇವರು ಈ ಕೆಳಗಿನ ಕೆಲಸಗಳಲ್ಲಿ ಗಮನ ಕೊಡುವರು ;

* ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ವಿಷಯಗಳ ಬಗ್ಗೆ ಚಟುವಟಿಕೆಗಳಿಗೆ ಚಾಲನೆ ಕೊಡುವುದು, ಸಂಯೋಜಿಸುವುದು.
* ಸಮಿತಿಯ ಹಣ ಎತ್ತುವ ಸಾಮರ್ಥ್ಯವನ್ನು ಬಲಗೊಳಿಸುವುದು.
* ಪ್ರಾದೇಶಿಕ ಚಟುವಟಿಕೆಗಳಿಗೆ ಒತ್ತಾಸೆ ನೀಡುವುದು.
* ಬೀಜಿಂಗಿನ ಸಮಾವೇಶದಲ್ಲಿ ನಡೆಯುವ ಚಟುವಟಿಕೆಗಳಿಗೆ ಒತ್ತಾಸೆ ನೀಡುವುದು.
* ಮಾಹಿತಿಯನ್ನು ಹೆಚ್ಚು ವಿಸ್ತಾರವಾಗಿ ಹರಡುತ್ತಾ ಬೇರೆ ಬೇರೆ ಬಗೆದು ಗುಂಪುಗಳು, ವ್ಯಕ್ತಿಗಳು ಹೆಚ್ಚೆಚ್ಚು ಭಾಗವಹಿಸುವಂತೆ ಮಾಡುವುದು.

1993ರ ಮೇನಲ್ಲಿ ಸಂಯೋಜಕಿಯು ಅಧಿಕೃತ ಪ್ರತಿನಿಧಿಗಳೊಂದಿಗೆ ಬೀಜಿಂಗಿಗೆ ಹೋಗಿ ಸಮಾವೇಶಕ್ಕೆ ಸೂಕ್ತ ಜಾಗವನ್ನು ಪರಿಶೀಲಿಸುವುದಲ್ಲದೆ ಆತಿಥೇಯ ದೇಶದ ಜತೆ ಅವಶ್ಯಕ ಚರ್ಚೆ ನಡೆಸಿದ್ದಾರೆ.

ಸರ್ಕಾರೇತರ ಪ್ಲಾನಿಂಗ್ ಸಮಿತಿಯು 1994ರಲ್ಲಿ UN/CSWನ 38ನೇ ಅಧಿವೇಶನಕ್ಕೆ ಮುಂಚಿತವಾಗಿ ನ್ಯೂಯಾರ್ಕಿನಲ್ಲಿ ಸಭೆ ಸೇರಲಿದೆ. ಈ ಎಲ್ಲ ಸಭೆಗಳ ಸಂಪೂರ್ಣ ಮಾಹಿತಿಗೆ ;

MARLENE PARENZAN<br>
Co-ordinator, NGO Planning Committee<br>
Kirchengasse 26, A-1071.<br>
Vieuna, Australia<br>
Tel/Fax - (43-1)-526-1899

ಇವರನ್ನು ಸಂಪರ್ಕಿಸಿ.

ಏಷ್ಯಾ ಮತ್ತು ಫೆಸಿಫಿಕ್ ಸರ್ಕಾರೇತರ ಸಭೆಯೊಂದು ಇದೇ ನವೆಂಬರ್ 16ರಿಂದ 21ರ ವರೆಗೆ ಫಿಲಿಪೈನ್ಸ್‌ನ ಮನಿಲಾದಲ್ಲಿ ನಡೆಯಲಿದೆ. ಈ ಸಭೆ ಮತ್ತು ಬೀಜಿಂಗ್ ಸಮಾವೇಶಗಳ ಬಗ್ಗೆ ಸಾಧ್ಯವಾದಷ್ಟೂ ಮಾಹಿತಿ ಒದಗಿಸಲು, ಭಾಗವಹಿಕೆ ಹೆಚ್ಚಿಸಲು ಭಾರತದಲ್ಲಿ 'ಅಭಿವೃದ್ಧಿಯಲ್ಲಿ ಮಹಿಳೆ ಅಂತರ-ಏಜನ್ಸಿ ಗುಂಪು' ಒಂದು ಅನೌಪಚಾರಿಕ ವರ್ಕಿಂಗ್ ಗ್ರೂಪ್‌ನ್ನು ರಚಿಸಿದೆ. ಇದನ್ನು 'ಬೀಜಿಂಗ್ 1995ಕ್ಕೆ ಅಂತರ ಏಜನ್ಸಿ ಸಹಾಯಕ ಸಮಿತಿ' ಎಂದು ಕರೆಯಲಾಗುತ್ತಿದ್ದು ದೇಶದ ಎಲ್ಲ ಭಾಗಗಳಲ್ಲೂ ಇದು ಪೂರ್ವಸಿದ್ಧತಾ ಸಭೆಗಳನ್ನು ನಡೆಸುತ್ತದೆ. ಭಾರತದ ಎಲ್ಲ ಭಾಗಗಳಲ್ಲೂ ಮಹಿಳೆಯರ ಪ್ರಶ್ನೆಯನ್ನು ಕುರಿತು ನಿರ್ದಿಷ್ಟ ಚರ್ಚೆಗಳನ್ನು ಕಾರ್ಯಾಗಾರಗಳ ಮೂಲಕ ನಡೆಸಿ, ಅವುಗಳಿಂದ ಹೊರಬಂದ ಅಂಶಗಳನ್ನು ದಾಖಲಿಸಿ ಅದನ್ನು ಮನಿಲಾ ಸಭೆಗೂ, ಬೀಜಿಂಗ್ ಸಮಾವೇಶಕ್ಕೂ ತಲುಪಿಸುವುದು ಈ ಸಮಿತಿಯ ಮುಖ್ಯ ಕೆಲಸ.

ಇಂತಹ ಒಂದು ಪ್ರಾದೇಶಿಕ ಸಮಾಲೋಚನಾ ಸಭೆಯನ್ನು ಕರ್ನಾಟಕದ ಮಟ್ಟದಲ್ಲಿ ಅಕ್ಟೋಬರ್ 5 ರಂದು ನಡೆಸಲಾಯಿತು. ಕನಾಟಕದ ಎಲ್ಲ ಕಡೆಯಿಂದ ಸ್ವಯಂಸೇವಾ ಸಂಸ್ಥೆಗಳು, ಸರ್ಕಾರೀ ಇಲಾಖೆಗಳು, ಅಧ್ಯಯನ ಸಂಸ್ಥೆಗಳಿಂದ ಅಲ್ಲದೆ ಕೆಲವು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿರುವ ಮಹಿಳೆಯರೂ ಸೇರಿದಂತೆ 66 ಜನ ಇದರಲ್ಲಿ ಭಾಗವಹಿಸಿದ್ದರು.

ಮೊದಲಿಗೆ ಕನ್ನಡಕ್ಕೆ ಅನುವಾದಿಸಲಾಗಿದ್ದ 1985ರ ವಿಶ್ವ ಸಮಾವೇಶದಲ್ಲಿ ಹೊರತರಲಾದ 'ಕ್ರಿ.ಶ. 2000ಕ್ಕೆ ಮಹಿಳಾ ಮುನ್ನಡೆಗಾಗಿ ಮುನ್ನೋಟದ ತಂತ್ರಗಳು' ದಾಖಲೆಯ ಒಟ್ಟಾರೆ ತಿರುಳನ್ನು ಮಂಡಿಸಲಾಯಿತು. ಹೀಗೆ ದಿನದ ಸಮಾಲೋಚನೆಗೆ ತಳಹದಿಯನ್ನು ರೂಪಿಸಿಕೊಂಡು ನಂತರ ಸಣ್ಣ ಗುಂಪುಗಳಲ್ಲಿ ಕರ್ನಾಟಕದ ಮಹಿಳೆಯಾರ, ವಿಶೇಷವಾಗಿ ಕೆಳಸ್ತರರ ಮಹಿಳೆಯರ ಸಂಬಂಧದ ಆದ್ಯತೆಯ ವಿಷಯಗಳನ್ನು ಗುರುತಿಸಲಾಯಿತು.

ನಂತರದ ಸಮಯದಲ್ಲಿ ಈ ಆದ್ಯತೆಯ ವಿಷಯಗಳನ್ನು ಸಣ್ಣ ಗುಂಪುಗಳಲ್ಲಿ ಆಳವಾಗಿ ಚರ್ಚಿಸಿ ಅವುಗಳ ಸಂಬಂಧದಲ್ಲಿ ಕೆಲವು ನಿರ್ಣಯಗಳನ್ನು, ಶಿಫಾರಸುಗಳನ್ನು ರೂಪಿಸಲಾಯಿತು. ಮತ್ತು ಅದನ್ನು ದಾಖಲೆಯ ರೂಪದಲ್ಲಿ ಹೊರತರಲಾಯಿತು. ದಿನದ ಸಮಾಲೋಚನೆಯಿಂದ ಹೊರಬಂದ ದಾಖಲೆ ಹೀಗಿದೆ :

**ಆರೋಗ್ಯ ಸಂತಾನೋತ್ಪತ್ತಿ :**

* ಹೊಸ ಬಗೆಯ ಚುಚ್ಚುಮದ್ದು, ನಾಟುವಿಕೆ ರೂಪದ ಗರ್ಭನಿರೋಧಕಗಳನ್ನೂ ಇತ್ತೀಚೆಗೆ ಸರ್ಕಾರ ಅಂಗೀಕರಿಸಿದೆ. ಅಪಾಯಕಾರಿಯಾದ ಇಂತಹವುಗಳ ಬಗ್ಗೆ ಅರಿವು ಮೂಡಿಸಲು ಸ್ವಯಂಸೇವಾ ಸಂಸ್ಥೆಗಳು ಕೆಲಸ ಮಾಡಬೇಕು.

* ದೊಡ್ಡ ವಿದ್ಯಾಲಯ, ಅಕಡೆಮಿಕ್ ವಲಯಗಳಲ್ಲಿ ಮಹಿಳೆಯರ ದೇಹ-ಹಕ್ಕುಗಳ ಬಗ್ಗೆ ಚರ್ಚೆ ನಡೆಯ ಬೇಕು.
* ಆರೋಗ್ಯ ಸಂಬಂಧೀ ಸೌಲಭ್ಯಗಳ ಬಗ್ಗೆ ಸರಿಯಾದ ಮಾಹಿತಿ ಟೀಕಾತ್ಮಕ ಅರಿವು ನೀಡಲು ಸ್ವಯಂಸೇವಾ ಸಂಸ್ಥೆಗಳು ಶ್ರಮಿಸಬೇಕು.
* ಮಹಿಳೆಯರಿಗೆ ಪ್ರಾಥಮಿಕ ಆರೋಗ್ಯ ಸೇವೆಯಲ್ಲಿ ತರಬೇತಿ ಸಿಗಬೇಕು.

### ಕಾನೂನು – ಹಿಂಸಾಚಾರ – ಲೈಂಗಿಕ ಹಿಂಸೆ

* ಮಹಿಳೆ ಮತ್ತು ಪುರುಷರಿಗೆ ಸಮಾನ ಆಸ್ತಿಯ ಹಕ್ಕನ್ನು ಹೇಳುವಂತಹ ಕಾನೂನು ತಿದ್ದುಪಡಿ ಬೇಕು. ಮಹಿಳೆ ಮತ್ತು ಪುರುಷರಿಬ್ಬರ ಹೆಸರಲ್ಲೂ ಆಸ್ತಿಯ ಜಂಟಿ ನೋಂದಾವಣೆಯಾಗಬೇಕು.
* ಕಾನೂನು ತಿದ್ದುಪಡಿ, ರಚನೆಗಳ ಕೊನೇಪಕ್ಷ 50 ಭಾಗ ಮಹಿಳೆಯರಿಂದ ಆಗಬೇಕು.
* ಸರ್ವರಿಗೂ ಸಮಾನ ವೇತನಗಳೇ ಮುಂತಾದ ಅನೇಕ ಕಾರ್ಯಗತಗೊಳ್ಳದ ಕಾನೂನುಗಳ ಬಗ್ಗೆ ಸ್ವಯಂ ಸೇವಾ ಸಂಸ್ಥೆಗಳು ಜನರಲ್ಲಿ ಅರಿವು ಮೂಡಿಸಬೇಕು.
* ಮಹಿಳೆಯರ ಕೇಸುಗಳು, ಮುಖ್ಯವಾಗಿ ಹಿಂಸಾಚಾರಕ್ಕೆ ಸಂಬಂಧಿಸಿದವು, ವೃಥಾ ಮುಂದಕ್ಕೆ ಹೋಗದೆ ಇಂತಿಷ್ಟೇ ಸಮಯದಲ್ಲಿ ಇತ್ಯರ್ಥವಾಗು ವಂತೆ ಮಾಡಬೇಕು.
* ಸ್ಥಳೀಯ ಪೋಲೀಸು ಠಾಣೆಗಳಲ್ಲಿ ದಾಖಲಾಗುವ ಮಹಿಳೆಯರ ಸಂಬಂಧದ ಕೇಸುಗಳ ಬಗ್ಗೆ ಆ ಪ್ರದೇಶದ ಮಹಿಳಾ ಗುಂಪುಗಳಿಗೆ ತಕ್ಷಣದ ಮಾಹಿತಿ ಒದಗಿಸಬೇಕು, ಅವು ಒತ್ತಡದ ಗುಂಪಾಗಿ ಕೆಲಸ ಮಾಡಲು ಸಹಾಯವಾಗುವಂತೆ.
* ರಾಜ್ಯದ ಜಿಲ್ಲೆಗಳು, ತಾಲೂಕುಗಳಲ್ಲಿ ಮಹಿಳಾ ಸೆಲ್‌ಗಳು ಹೆಚ್ಚಾಗಬೇಕು. ಮಹಿಳೆಯರೇ ಇದರ ಸಂಪೂರ್ಣ ಹಿಡಿತ ಹೊಂದಿರಬೇಕು.
* ಸರಕಾರದ ಸಂಪನ್ಮೂಲದ ಕೆಲಭಾಗ ಇಂತಹ ಮಹಿಳಾ ಗುಂಪುಗಳಿಗೆ ನೀಡಬೇಕು.
* ಮದ್ಯಪಾನದ ಬಗ್ಗೆ ದೊಡ್ಡ ಮಟ್ಟದಲ್ಲಿ ಮಹಿಳೆಯರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮ ಬರಬೇಕು – ಆಂಧ್ರದ ರೀತಿಯಲ್ಲಿ.
* ಯೂನಿಫಾರಂ ಸಿವಿಲ್ ಕೋಡ್ ಜಾರಿಯಾಗಬೇಕು.

### ಉದ್ಯೋಗ ಮತ್ತು ಹೊಸ ಆರ್ಥಿಕ ನೀತಿ

* ಹೊಸ ಆರ್ಥಿಕ ನೀತಿಯಿಂದ ಅಸಂಘಟಿತ ವಲಯದ ಮಹಿಳೆಯರು ಮತ್ತಷ್ಟು ಅಂಚಿಗೆ ತಳ್ಳಲ್ಪಡುವುದರಿಂದ ಈ ನಿಟ್ಟಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು, ಸರಕಾರ ಸೂಕ್ತ ಕ್ರಮ ತೆಗೆದುಕೊಳ್ಳಬೇಕು.
* ಮುಕ್ತ ನೀತಿಯಿಂದ ಪ್ರವಾಸೋದ್ಯಮ ಮತ್ತಷ್ಟು ಬಲಗೊಂಡು ಇಲ್ಲಿ ಈಗಾಗಲೇ ಇರುವ ಮಹಿಳೆಯರ ದುರ್ಬಳಕೆ ಹೆಚ್ಚುತ್ತಿದೆ. ಇದರ ವಿರುದ್ಧ ಮಹಿಳಾ ಸಂಘಟನೆಗಳು ಹೋರಾಟ ಸನ್ನದ್ಧರಾಗಬೇಕು.
* ಅಸಂಘಟಿತ ವಲಯಗಳಲ್ಲಿ ಮಹಿಳೆಯರಿಗೆ ಸಮಾನ ಕೂಲಿ ಬೇಕು.
* ಅಭಿವೃದ್ಧಿಯಲ್ಲಿ ಬಹುಮುಖ್ಯವಾಗಿ ಎಲ್ಲರಿಗೂ ಎರಡು ಹೊತ್ತಿನ ಊಟ ಸಿಗುವಂತಹ ಕಾರ್ಯಕ್ರಮಗಳು ಬೇಕು.
* ಹೊಸ ಆರ್ಥಿಕ ನೀತಿ, ರಾಚನಿಕ ಹೊಂದಾಣಿಕೆಗಳು ಮಹಿಳೆಯರ ಮೇಲೆ ಸಾಮಾಜಿಕ, ರಾಜಕೀಯ, ಮತ್ತು ಆರ್ಥಿಕವಾಗಿ ತೀವ್ರ ಪರಿಣಾಮಗಳನ್ನುಂಟು ಮಾಡುವುದರಿಂದ ಮಹಿಳಾ ಚಳವಳಿ ಇದನ್ನು ತುಂಬಾ ಗಂಭೀರವಾಗಿ ತೆಗೆದುಕೊಳ್ಳಬೇಕು.

### ಮಹಿಳೆಯರ ಸಶಕ್ತತೆ

* ಒಬ್ಬಂಟಿ ಮಹಿಳೆಯರನ್ನೂ ವ್ಯಕ್ತಿಗಳಾಗಿ ಪರಿಗಣಿಸಿ ಅವರ ಘನತೆಯನ್ನು ಮನ್ನಿಸುವಂತಹ ಅರಿವು ಮೂಡಿಸುವಲ್ಲಿ ಮಹಿಳಾ ಸಂಘಟನೆಗಳು ಕೆಲಸ ಮಾಡಬೇಕು.
* ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕಿನ ಬಗ್ಗೆ ಕುಟುಂಬ – ಪೋಷಕರಲ್ಲಿ ಮತ್ತು ಸ್ವತಃ ಹೆಣ್ಣುಮಕ್ಕಳಲ್ಲಿ ಅರಿವು ಮೂಡಿಸುವ ಕೆಲಸ ಮಹಿಳಾ ಸಂಘಟನೆಗಳು ಮಾಡಬೇಕು. ಈ ನಿಟ್ಟಿನಲ್ಲಿ ವಿಲ್ ತಯಾರಿಸುವ ಪ್ರಕ್ರಿಯೆಗಳಿಗೆ ಸಹಾಯ ಮಾಡಬೇಕು.
* ಮಹಿಳಾ ಸಶಕ್ತತೆಯ ಕಾರ್ಯಕ್ರಮಗಳು ಕಾಲಕ್ರಮದಲ್ಲಿ ಪುರುಷರ ಹಿಡಿತದೊಳಕ್ಕೆ ತೂರಿಕೊಳ್ಳುವುದನ್ನು ತಪ್ಪಿಸಲು ಪರಿಶ್ರಮಿಸಬೇಕು.
* 'ಮಹಿಳೆ ಮತ್ತು ಶಿಶು ಕಲ್ಯಾಣ ಇಲಾಖೆ' ಎನ್ನುವಂತಹ ಕಲ್ಪನೆಗಳೇ ಮಹಿಳೆಯರನ್ನು ಕೇವಲ ತಾಯಿಯಾಗಿ ಮತ್ತು ಪುರುಷರಿಗೆ ಮಕ್ಕಳ ಕಲ್ಯಾಣ

ದಲ್ಲಿ ಪಾತ್ರವಿಲ್ಲದೇ ಇರುವಂತಹ ಅಂಶಗಳನ್ನು ಪುನರ್‌ಸೃಷ್ಟೀಕರಿಸುವುದರಿಂದ ಈ ಕಲ್ಪನೆಯನ್ನೇ ಬದಲಾಯಿಸಿ ಪ್ರಾಯಶಃ dept. of parents & children. ಎಂದು ಬದಲಾಯಿಸುವಂತೆ ಒತ್ತಾಯಿಸಬೇಕು.

* ಮಹಿಳೆಯರು ತಮ್ಮ ಹಕ್ಕುಗಳ ಹೋರಾಟದಲ್ಲಿ ಅಡ್ಡಿ ಬರುವ ಸಂಪ್ರದಾಯಗಳನ್ನು ಮುರಿಯುವಂತಹ ಅರಿವು ಮಹಿಳಾ ಸಂಘಟನೆಗಳು ಮೂಡಿಸಬೇಕು.

**ರಾಜಕೀಯ, ಮೀಸಲಾತಿ**

* ಮಹಿಳೆಯರು ಹೆಚ್ಚೆಚ್ಚು ರಾಜಕೀಯ ಪ್ರಕ್ರಿಯೆಯಲ್ಲಿ ಒಳಗೊಳ್ಳಲು ಉತ್ತೇಜನ ಕೊಡಬೇಕು.
* ಈಗ ಇರುವ 30% ಮೀಸಲಾತಿಯನ್ನು 50% ಗೆ ಏರಿಸಬೇಕು.
* ರಾಜಕೀಯದಲ್ಲಿರುವ ಮಹಿಳೆಯರಿಗೆ ಅವರ ಹಕ್ಕು –ಜವಾಬ್ದಾರಿಗಳಲ್ಲಿ ಸ್ತ್ರೀಪರ ದೃಷ್ಟಿಕೋನ ಹೊಂದಲು, ಈಗಿರುವ ಜಢ ರಾಜಕೀಯ ಸಂಸ್ಕೃತಿಯನ್ನು ಬದಲಾಯಿಸಲು ಸೂಕ್ತ ತರಬೇತಿ ದೊರಕಿಸಬೇಕು.
* ರಾಜಕೀಯದಲ್ಲಿರುವ ಮಹಿಳೆಯರನ್ನು ಮಹಿಳಾ ಹಕ್ಕುಗಳಿಗಾಗಿ ಹೋರಾಡುತ್ತಿರುವ ಗುಂಪುಗಳಿಗೆ ಪರಿಚಯಿಸಬೇಕು.

**ಜಾತಿ, ಧರ್ಮ, ಕೋಮುವಾದ**

* ರಾಜ್ಯಾಂಗವು ಕೋಮುವಾದ, ಹಿಂಸಾಚಾರಗಳನ್ನು ಪ್ರಚೋದಿಸುವಲ್ಲಿ ಬಹು ಮುಖ್ಯ ಪಾತ್ರ ವಹಿಸುತ್ತಿರುವುದರ ಬಗ್ಗೆ ಎಚ್ಚರಿಕೆಯಿಂದಿದ್ದು ಮಹಿಳಾ ಸಂಘಟನೆಗಳು ಅದರ ವಿರುದ್ಧದ ಶಕ್ತಿಯಾಗಿ ಬೆಳೆಯಬೇಕು. ಮಹಿಳಾ ಪ್ರಶ್ನೆಗಳೆಡೆಯಿಂದ ಇದರೆಡೆಗೆ ಗಮನ ಸೆಳೆಯಲ್ಪಡುವುದರ ಬಗ್ಗೆ ಎಚ್ಚರಿಕೆಯಿಂದಿರಬೇಕು.
* ವಯಕ್ತಿಕ ಕಾನೂನು, ಉತ್ತರಾಧಿಕಾರ, ಆಸ್ತಿ ಹಕ್ಕುಗಳ ಸಂಬಂಧದಲ್ಲಿ ಧರ್ಮದಲ್ಲಿ ಸುಧಾರಣೆಯಾಗಬೇಕು.

**ಶಿಕ್ಷಣ**

* ಹೆಣ್ಣುಮಕ್ಕಳಿಗೆ ಶಿಕ್ಷಣ ಪಡೆಯುವಲ್ಲಿ ಇರುವ ಸಮಸ್ಯೆಗಳನ್ನು ಗುರುತಿಸಿ ಸೂಕ್ತ ಕ್ರಮ ತಗೆದುಕೊಳ್ಳಬೇಕು.
* ಪಠ್ಯಕ್ರಮ ರಚನೆಯಲ್ಲಿ ಮಹಿಳಾ ಸಮಾನತೆಯ ದೃಷ್ಟಿಕೋನದಿಂದ ಮರು ಚಿಂತನೆಯಾಗಬೇಕು.
* ಶಿಕ್ಷಕರಲ್ಲಿ ಲಿಂಗ ಪ್ರಜ್ಞೆ ಮೂಡಿಸಬೇಕು.
* ಸ್ತ್ರೀ ಸಂವೇದನೆಯ ಹೊಸ ಬಗೆಯ ಶಿಕ್ಷಣ ಸಾಮಗ್ರಿಗಳ ತಯಾರಿಯಾಗಬೇಕು.
* ಶಿಕ್ಷಣದಲ್ಲಿ ತರಬೇತಿ ತುಂಬಾ ಮುಖ್ಯ ಅಂಗ. ಎಲ್ಲ ಕ್ಷೇತ್ರ, ಹಂತಗಳಲ್ಲಿ ವಿಸ್ತಾರವಾದ ತರಬೇತಿ ಸಿಗುವಂತೆ ಮಾಡಬೇಕು.

**ವಿ. ಗಾಯತ್ರಿ**

---

ECOSCO : The Economic And Social Council of The United Nations

CONGO : The Conference Of Non Governmental Organizations

---

# ಹೊಸ ಗರ್ಭ ನಿರೋಧಕಗಳ ಬಗ್ಗೆ ಮಹಿಳೆಯರಿಗೆ ಮಾಹಿತಿಗಳು

## (ವಿಶೇಷವಾಗಿ ಧೀರ್ಘಾವಧಿ ಹಾರ್ಮೋನ್ ನಾಟುವಿಕೆ ಹಾಗು ಚುಚ್ಚು ಮದ್ದುಗಳು)

---

ಮೂರು ತಿಂಗಳಿಂದ ಐದು ವರ್ಷಗಳವರೆಗೆ ಗರ್ಭ ತಡೆಗಟ್ಟುವ ಕೆಲವು ಅದ್ಭುತವಾದ ಹೊಸ ಗರ್ಭ ನಿರೋಧಕಗಳ ಬಗ್ಗೆ ನಿಮಗೆ ಅಥವಾ ನಿಮ್ಮ ಸಂಪರ್ಕದ ಇತರ ಹೆಂಗಸರಿಗೆ ತಿಳಿಸಲಾಗಿದೆಯೇ ?

ತಿಳಿಸಲಾಗಿದ್ದರೆ, ನಿಮ್ಮನ್ನು ಒಂದು ಹೊಸದಾದ ಕುಟುಂಬ ಯೋಜನೆಯ ಪ್ರಯೋಗಕ್ಕೆ ಸೇರಿಸಿಕೊಳ್ಳುವ ಸಂಭವ ಉಂಟು. ಇಲ್ಲಿ ಗಮನಿಸಬೇಕಾದ್ದೆಂದರೆ, ಈ ಯೋಜನೆಯನ್ನು ಮನುಷ್ಯರ ಮೇಲೆ ತಕ್ಕ ರೀತಿಯಲ್ಲಿ ಪರೀಕ್ಷೆ ಮಾಡಲಾಗಿಲ್ಲ ಎಂಬುದು. ದೇಶದ ಹತ್ತು ಆಸ್ಪತ್ರೆಗಳು–ಕರ್ನಾಟಕದ ಬೆಳಗಾವಿ ಹಾಗು ತಮಿಳು ನಾಡಿನ ಮದ್ರಾಸ್ ಒಳಗೊಂಡಂತೆ, ಈಗಾಗಲೇ ಈ ಹೊಸ ಗರ್ಭ ನಿರೋಧಕಗಳನ್ನು ಜನರಿಗೆ ಪ್ರಯೋಗದ ಭಾಗವಾಗಿ ನೀಡುತ್ತಿವೆ. ಬಹು ಬೇಗ ಇತರೆ ಮೂವತ್ತು ಕೇಂದ್ರಗಳು ಈ ಯೋಜನೆಯನ್ನು ಪ್ರಾರಂಭಿಸಲಿವೆ.

ಪದೇ ಪದೇ ಗರ್ಭ ಧರಿಸುವ ಸಂಕಷ್ಟದಿಂದ ದೂರ ವಿರಬೇಕೆನ್ನುವುದು ನಿಮ್ಮ ಚಿಂತೆಯೇ ? ಗರ್ಭ ಧರಿಸುವುದನ್ನು ತಡೆಗಟ್ಟಲು ಅಥವಾ ಮಕ್ಕಳು ಇನ್ನು ಮುಂದೆ ಬೇಡವೆಂದು ನಿರ್ಧರಿಸಲು ಸಮಯ ಬೇಕಾಗಿರುವುದರಿಂದ ಅಥವಾ ಬೇರೆ ಯಾವ ಕಾರಣಕ್ಕೆ ಆಗಲಿ ನೀವು ಈ ಹೊಸ ದೀರ್ಘಾವಧಿ ಗರ್ಭ ನಿರೋಧಕಗಳನ್ನು ಸ್ವೀಕರಿಸಲು ಇಚ್ಚಿಸುವಿರಾ ?

ಈ ಹೊಸ ಗರ್ಭ ನಿರೋಧಕ ಯೋಜನೆಗಳನ್ನು ಸ್ವೀಕರಿಸಿ ಉಪಯೋಗಿಸುವ ಮುನ್ನ ಇವುಗಳ ಬಗ್ಗೆ ಕೆಲವು ನಿಜಾಂಶಗಳನ್ನು ತಿಳಿದುಕೊಳ್ಳುವುದು ಅವಶ್ಯಕ.

ಈಗ ಬಂದಿರುವ ಹೊಸ ಗರ್ಭನಿರೋಧಕಗಳು ಎರಡು ಬಗೆ. ಒಂದು ಚುಚ್ಚು ಮದ್ದು, ಮತ್ತೊಂದು ನಾಟುವಿಕೆ (ಆರು ಬೆಂಕಿ ಕಡ್ಡಿ ರೀತಿಯಲ್ಲಿರುವ ತಂತಿಗಳನ್ನು ತೋಳಿನ ಒಳಭಾಗದ ಚರ್ಮದ ಅಡಿಯಲ್ಲಿ ಸಣ್ಣ ಶಸ್ತ್ರಕ್ರಿಯೆಯ ಮೂಲಕ ಅಳವಡಿಸಲಾಗುವುದು). ಎರಡೂ ಒಂದೇ ರೀತಿಯ ಪದಾರ್ಥವನ್ನು ಹೊಂದಿರುತ್ತವೆ. ಅಂದರೆ ಇವು ಪ್ರೊಜೆಸ್ಟ್ರೋನ್ ಎಂಬ ಗರ್ಭಕ್ಕೆ ಸಂಬಂಧಪಟ್ಟ ಹಾರ್ಮೋನಿನ ಕೃತಕ ರೂಪಗಳು. ಭಾರತದಲ್ಲಿ ಮುಂದೆ ಪ್ರಯೋಗಿಸಲಾಗುವ ಚುಚ್ಚು ಮದ್ದಿನ ಹೆಸರು ಡೆಪೋ–ಪ್ರೊವೆರಾ. ಇದರ ಗರ್ಭ ನಿರೋಧಕ ಶಕ್ತಿ ಮೂರು ತಿಂಗಳು. ಈಗಾಗಲೇ ಪ್ರಾರಂಭವಾಗಿರುವ ಪ್ರಯೋಗದಲ್ಲಿ ಉಪಯೋಗಿಸುತ್ತಿರುವ ನಾಟುವಿಕೆ ಗರ್ಭ ನಿರೋಧಕದ ಹೆಸರು ನಾರ್‌ಪ್ಲಾನ್ಟ್ ಎಂದು. ಇದು ಐದು ವರ್ಷ ಗರ್ಭವನ್ನು ತಡೆಗಟ್ಟುತ್ತದೆ.

ಬಹಳಷ್ಟು ಜನರ ನಂಬಿಕೆಯ ಪ್ರಕಾರ ಈ ಮೇಲೆ ತಿಳಿಸಿರುವ ಹೊಸ ಗರ್ಭ ನಿರೋಧಕಗಳು ನಮ್ಮ ಬಹುಪಾಲು ಭಾರತೀಯ ಮಹಿಳೆಯರಿಗೆ ಸೂಕ್ತ ಹಾಗು ಕ್ಷೇಮವಲ್ಲ. ಅದಕ್ಕೆ ಕಾರಣಗಳೆಂದರೆ :

1) ನಾರ್‌ಪ್ಲಾನ್ಟ್ ನಂತಹ ಗರ್ಭನಿರೋಧಕವನ್ನು ಕೆಲವು ರೋಗ ಹಾಗು ದೋಶಗಳಿರುವ ಮಹಿಳೆಯರು ಉಪಯೋಗಿಸುವುದು ಅಪಾಯಕರ. ಅವುಗಳೆಂದರೆ : 1. ಮುಟ್ಟಿನಲ್ಲಿ ವ್ಯತ್ಯಾಸ 2. ರಕ್ತಹೀನತೆ 3. ಪತ್ತೆ ಹಚ್ಚದ ಬಿಳಿಸೆರಗು 4. ಕ್ಷಯ 5. ಕುಷ್ಠರೋಗ 6. ಕಾಮಾಲೆ 7. ಪಿತ್ತಕೋಶದ ಖಾಯಿಲೆ 8. ಮದುಮೇಹ 9. ರಕ್ತ ಹೆಪ್ಪು ಗಟ್ಟುವಿಕೆ ತೊಂದರೆಗಳು 10. ಹೃದ್ರೋಗ 11. ರಕ್ತದ ಒತ್ತಡ 12. ಯಾವುದೇ ರೀತಿಯ ಅಲರ್ಜಿ (ಆಸ್ಥಮ, ಹೇಜ್ವರ ಮುಂತಾದವುಗಳು) 14. ಕ್ಯಾನ್ಸರ್. ಭಾರತದಲ್ಲಿ ಹೆಚ್ಚಿನ ಮಹಿಳೆಯರು ಈ ಮೇಲ್ಕಂಡ ಒಂದಲ್ಲಾ ಒಂದು ರೋಗಗಳಿಂದ ನರಳುತ್ತಿರುತ್ತಾರೆ. ಅಲ್ಲದೆ ಈ ಗರ್ಭ ನಿರೋಧಕಗಳು ಗರ್ಭಿಣಿಯರಿಗೆ ಹಾಗು ಬಾಣಂತಿಯರಿಗೆ ಸೂಕ್ತವಲ್ಲ. **ನಮ್ಮ ಈಗಿನ ಕುಟುಂಬ ಯೋಜನೆಯ ಕೇಂದ್ರಗಳು ಹಾಗು ಶಿಬಿರಗಳಲ್ಲಿನ ಕಾರ್ಯ ವಿಧಾನಗಳನ್ನು ಗಮನದಲ್ಲಿಟ್ಟುಕೊಂಡರೆ, ಮೇಲೆ ತಿಳಿಸಿರುವ ಎಲ್ಲ ಸ್ಥಿತಿ-ಗತಿಗಳನ್ನು ಸಂಪೂರ್ಣ ತಪಾಸಣೆ ಮಾಡಿದ ನಂತರ ಈಗ ಬಂದಿರುವ ಹೊಸ ಗರ್ಭ ನಿರೋಧಕಗಳನ್ನು ಕೊಡಲಾಗುವುದೆಂಬುದಕ್ಕೆ ಯಾವ ಆಧಾರವುಂಟು ?**

2) ಈ ಹೊಸ ಹಾರ್ಮೋನ್ ಗರ್ಭ ನಿರೋಧಕಗಳ ದುಷ್ಪರಿಣಾಮಗಳು ಹಲವು. ಅಧಿಕ ಹಾಗು

ಎಡಬಿಡದ ರಕ್ತಸ್ರಾವ ಮತ್ತು ಮುಟ್ಟಾಗದಿರುವುದು, ಹೃದ್ರೋಗಗಳು, ಪಿತ್ತಕೋಶದ ತೊಂದರೆ, ರಕ್ತ ಹೆಪ್ಪುಗಟ್ಟುವಿಕೆ, ತಲೆನೋವು, ಖಿನ್ನತೆ, ನರದೌರ್ಬಲ್ಯ, ಹಸಿವಾಗುವುದರಲ್ಲಿ ವ್ಯತ್ಯಾಸ, ಹೊಟ್ಟೆ ತೊಳೆಸುವುದು ಹಾಗು ತೂಕ ಹೆಚ್ಚುವುದು. **ಭಾರತದ ಮಹಿಳೆಯ ಸಾಮಾನ್ಯ ಆರೋಗ್ಯ ಮಟ್ಟವನ್ನು ಮತ್ತು ಆರೋಗ್ಯದ ಸೇವೆಗಳು ಅವರಿಗೆ ದಕ್ಕದೇ ಇರುವಂತಹ ಸ್ಥಿತಿಯನ್ನು ಗಣನೆಗೆ ತೆಗೆದುಕೊಂಡಾಗ, ಹಲವರು ಅಭಿಪ್ರಾಯ ಪಡುವಂತೆ "ಇವೆಲ್ಲಾ ಸುಮ್ಮನೆ ಕಡೆಗಣಿಸಿ ಬಿಡಬಹುದಾದ ದುಷ್ಪರಿಣಾಮಗಳು" ಎಂದು ನಿಮಗನ್ನಿಸುತ್ತದೆಯೇ ?**

3) ನಾರ್‌ಪ್ಲಾನ್ಟ್ ಗರ್ಭ ನಿರೋಧಕವು ನಿಮ್ಮ ದೇಹದಲ್ಲಿ ಐದು ವರ್ಷಗಳಿಗಿಂತ ಹೆಚ್ಚು ಕಾಲ ಉಳಿದರೆ ಅದು Ectopic ಗರ್ಭಕ್ಕೆ (ಅಂದರೆ ಗರ್ಭಾಶಯದಲ್ಲಿ ಬೆಳೆಯಬೇಕಾದ ಭ್ರೂಣವು ಗರ್ಭನಾಳದಲ್ಲಿ ಬೆಳೆಯುವುದು) ಕಾರಣವಾಗಬಹುದು. ಇದು ತೀರಾ ಅಪಾಯಕಾರಿ. ಇದರಿಂದ ತಾಯಿ ಸಾವಿಗೀಡಾಗಬಹುದು. **ಕುಟುಂಬ ಯೋಜನೆಯ ಸಿಬ್ಬಂದಿಯೊಂದಿಗೆ ನಿಮ್ಮ ಹಿಂದಿನ ಅನುಭವವನ್ನು ನೋಡುವಾಗ, ಅವರು ಈ ಗರ್ಭ ನಿರೋಧಕ ಸಾಧನವನ್ನು ನಿಮ್ಮ ದೇಹದಿಂದ ಸಮಯಕ್ಕೆ ಸರಿಯಾಗಿ ತೆಗೆದು ಹಾಕುವರೆಂದು ಊಹಿಸುವಿರಾ ? ಐದು ವರ್ಷಗಳ ನಂತರ ಇದನ್ನು ತೆಗೆಸಿ ಹಾಕಲು ನಿಮಗೆ ನೆನಪಿರುತ್ತದೆಯೆಂಬುದು ಯಾವ ಖಾತ್ರಿ ?**

4) ನಾರ್‌ಪ್ಲಾನ್ಟ್ ಗರ್ಭ ನಿರೋಧಕವನ್ನು ಒಮ್ಮೆ ಉಪಯೋಗಿಸಿದ ನಂತರ ಮತ್ತೆ ಮಕ್ಕಳಾಗುವುದೆಂಬುದು ಯಾವ ಅಧ್ಯಯನದಿಂದಲೂ ಇನ್ನು ಖಚಿತವಾಗಿಲ್ಲ.

6) ಗರ್ಭ ನಿರೋಧಕ ಚುಚ್ಚುಮದ್ದುಗಳು ಹಾಗು ನಾಟುವಿಕೆ ಕೇವಲ ಒಬ್ಬ ತರಬೇತು ಪಡೆದಿರುವ ವೈದ್ಯ ಅಧಿಕಾರಿ ಮಾತ್ರ ಮಾಡತಕ್ಕದ್ದು. ಲಸಿಕೆಯ ರೂಪವಾದ್ದರಿಂದ ಅದು ಗರ್ಭ ನಿರೋಧಕ ಲಸಿಕೆಯೆಂದು ನಿಮ್ಮ ಅರಿವಿಗೆ ಬರುವುದಿಲ್ಲ. ನಾಟುವಿಕೆ ಕೂಡ, ಅದು ಏನು ? ಏಕೆ ? ಎಂಬ ಯಾವುದೇ ಹೆಚ್ಚು ಮಾಹಿತಿ ಇಲ್ಲದೆ ಕೊಡಲ್ಪಡಬಹುದು. ಒಮ್ಮೆ ಈ ಲಸಿಕೆಯನ್ನು ಕೊಟ್ಟ ನಂತರ ಅದರ ಅವಧಿ ಮುಗಿಯುವವರೆಗೂ ಏನೂ ಮಾಡಲು ಸಾಧ್ಯವಿಲ್ಲ. ಬೆಲೆಯುಳ್ಳ ಸಾಧನವಾದ ಈ ನಾಟುವಿಕೆಯನ್ನು ಒಮ್ಮೆ ದೇಹದಲ್ಲಿ ಅಳವಡಿಸಿದರೆ ಮತ್ತೆ ಅದನ್ನು ತಜ್ಞವೈದ್ಯರಿಂದಲೇ ತೆಗೆಸಬೇಕು. **ಕುಟುಂಬ ಯೋಜನೆಯ ಸಿಬ್ಬಂದಿಯೊಂದಿಗಿನ ಹಿಂದಿನ ಅನುಭವಗಳನ್ನು ಗಮನಿಸಿದರೆ ಅದರ ದುಷ್ಪರಿಣಾಮಗಳಿದ್ದಾಗ ಅಥವಾ ಇತರ ಕಾರಣಗಳಿಂದಾಗಿ ಅದನ್ನು ಬೇಕೆಂದಾಗ ತೆಗೆಸಬಹುದೆಂಬ ಆತ್ಮವಿಶ್ವಾಸ ನಿಮಗಿದೆಯೆ ?**

6) ಮಹಿಳೆಯರಿಗೆ ಕುಟುಂಬ ಯೋಜನಾ ವಿಧಾನಗಳಲ್ಲಿ ಹೆಚ್ಚು ಆಯ್ಕೆಯಿರಲಿ ಮತ್ತು ತಮ್ಮ ದೇಹದ ಮೇಲೆ ಹೆಚ್ಚು ಹತೋಟಿ ಇರಲಿ ಎನ್ನುವ ಕಾರಣಕ್ಕೆ ಲಸಿಕೆ ಮತ್ತು ನಾಟುವಿಕೆಗಳಂತಹ ಗರ್ಭನಿರೋಧಕಗಳನ್ನು ಕೊಡಲಾಗುವುದು ಎಂದು ಹೇಳಲಾಗುತ್ತದೆ. **ಆದರೆ ಮೇಲಿನ ಮಾಹಿತಿಯನ್ನು ಮತ್ತು ಕುಟುಂಬ ಯೋಜನೆಯ ಕಾರ್ಯಕ್ರಮಗಳ ಹಿಂದಿನ ಅನುಭವಗಳನ್ನು ನೆನೆಸಿದಾಗ ನೀವು ಇದನ್ನು ನಿಜ ಎಂದು ನಂಬುವಿರಾ ?**

7) ಇಂತಹ ಸೂಕ್ಷ್ಮ ಗರ್ಭ ನಿರೋಧಕಗಳನ್ನು ಉಪಯೋಗಿಸಲು ಸಮರ್ಥ ಹಾಗು ಸುಲಭವಾಗಿ ಲಭ್ಯವಿರುವ ಆರೋಗ್ಯದ ಆರೈಕೆಯ ವ್ಯವಸ್ಥೆ ಅವಶ್ಯಕ. ಇಲ್ಲಿ ಸರಿಯಾದ ಪೂರ್ವಭಾವೀ ತಪಾಸಣೆ, ನಿರಂತರ ಫಾಲೋ– ಅಪ್ ಮತ್ತು ಮೇಲ್ವಿಚಾರಣೆ ಇವೆಲ್ಲಾ ಸೇರುತ್ತವೆ. ಗರ್ಭ ನಿರೋಧಕ ಸಾಧನವನ್ನು ತೆಗೆಯಿಸುವ ಗ್ರಾಹಕರು/ರೋಗಿಯ ಇಚ್ಛೆಯನ್ನು ಗೌರವಿಸುವುದು ಅತ್ಯವಶ್ಯಕ.

**ನಿಮಗೆ ಲಭ್ಯವಿರುವ ಆರೋಗ್ಯ ಸೇವಾ ಸೌಲಭ್ಯಗಳು ಈ ಎಲ್ಲ ಅವಶ್ಯಕತೆಗಳನ್ನು ಪೂರೈಸುತ್ತಿವೆಯೇ ?**

ಒಬ್ಬ ನಾಗರೀಕ ಹಾಗೂ ಗ್ರಾಹಕರಾಗಿ, ನಿಮಗೆ ಕೆಲವು ಹಕ್ಕುಗಳುಂಟು. ಆರೋಗ್ಯ ಹಾಗು ಕುಟುಂಬ ಯೋಜನೆಯ ಕಾರ್ಯಕರ್ತರಿಗೆ ಕೆಲವು ಜವಾಬ್ದಾರಿಗಳುಂಟು. ನಿಮಗೆ ಸಂಪೂರ್ಣ ಮತ್ತು ಸರಿಯಾದ ಮಾಹಿತಿ ತಿಳಿದುಕೊಳ್ಳುವ ಹಕ್ಕಿದೆ. ದುಷ್ಪರಿಣಾಮ, ಮತ್ತೆ ಫಲವತಿಯಾಗುವುದು ಮತ್ತು ಕೋರಿಕೆಯ ಮೇರೆಗೆ ತೆಗೆಸುವುದು ಇತ್ಯಾದಿ, ಇವುಗಳ ಬಗ್ಗೆ ಪ್ರಶ್ನೆಗಳನ್ನು ಕೇಳುವ ಅಧಿಕಾರ ನಿಮಗಿದೆ. ಇವುಗಳಿಗೆಲ್ಲಾ ಸಂಪೂರ್ಣವಾದ ಮತ್ತು ಸತ್ಯವಾದ ಮಾಹಿತಿ ಕೊಡು

ವುದು ಅವರ ಕರ್ತವ್ಯ. ನಿಮ್ಮ ಅವಶ್ಯಕತೆಗೆ ಅನುಕೂಲವಾದ ಗರ್ಭ ನಿರೋಧಕ ವಿಧಾನವನ್ನು ಆಯ್ದುಕೊಳ್ಳುವ ಅಧಿಕಾರ ನಿಮಗಿದೆ. ಹೆದರಿಸಿ ಅಥವಾ ಬಲವಂತವಾಗಿ ಗರ್ಭ ನಿರೋಧಕ ವಿಧಾನಗಳಿಗೆ ನಿಮ್ಮನ್ನು ಒಪ್ಪಿಸುವ ಅಧಿಕಾರ ಅವರಿಗಿಲ್ಲ.

ನಿಮ್ಮನ್ನು ದಾಖಲಾತಿಯಲ್ಲಿ ನೊಂದಾಯಿಸಿಕೊಳ್ಳುವ ಮೊದಲು ನಿಮ್ಮ ಸಮ್ಮತಿಗಾಗಿ ನಿಮಗೆ ತಿಳಿದಿರುವ ಭಾಷೆಯಲ್ಲಿ ನಿಮಗೆ ಮಾಹಿತಿ ನೀಡುವುದು ಅವರ ಕರ್ತವ್ಯ. (ನೀವು ಅನಕ್ಷರಸ್ಥರಾಗಿದ್ದರೆ ನಂಬಿಕೆಯಿರುವ ವ್ಯಕ್ತಿಯಿಂದ ಓದಿಸಿ ನಂತರ ಸಹಿ ಅಥವಾ ಹೆಬ್ಬೆಟ್ಟನ್ನು ಹಾಕಬೇಕು). ನಿಮ್ಮ ಒಪ್ಪಿಗೆ ಪಡೆದ ನಂತರ ಸಂಪೂರ್ಣವಾಗಿ ನಿಮ್ಮನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಿ ಈ ಗರ್ಭನಿರೋಧಕಗಳನ್ನು ಯಾವ ಸ್ಥಿತಿಗತಿಯಡಿ ಉಪಯೋಗಿಸಬಾರದೋ ಅಂತಹ ಯಾವುದೇ ಸ್ಥಿತಿಯಲ್ಲೂ ನೀವು ಇಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.

ನಿಮ್ಮ ಹಕ್ಕುಗಳನ್ನು ಪೂರೈಸಿ ಅವರು ತಮ್ಮ ಕರ್ತವ್ಯಗಳನ್ನು ಪಾಲಿಸುತ್ತಾರೆ ಎಂಬುದನ್ನು ಖಚಿತಪಡಿಸಿಕೊಳ್ಳಿ. ಹೆಚ್ಚಿನ ಮಾಹಿತಿಗೆ ವುಮೆನ್ಸ್ ಹೆಲ್ತ್ ಫೋರಂ ಅನ್ನು ಸಂಪರ್ಕಿಸಿ.

ವಿಳಾಸ :
Women's Health Forum
C/o Madhyam Communications
P. B. 4610, 59, Miller's Road
Benson Town
Bangalore-560046

## ತಸ್ಲೀಮಾ ನಸರೀನ್

ಮುಸ್ಲಿಂ ಸಮಾಜದಲ್ಲಿ ಮಹಿಳೆಯರ ದಮನ, ಇಸ್ಲಾಂ ಕಾನೂನಿನಡಿ ಮಹಿಳೆಯರ ಚಾರಿತ್ರಿಕ ದಾಸ್ಯ, ಪುರುಷರ ಲೈಂಗಿಕ ಪ್ರಾಬಲ್ಯ ಇತ್ಯಾದಿಗಳ ಬಗ್ಗೆ ತೀರಾ ನಿರ್ಭಿಡೆಯಿಂದ ಬರೆಯುತ್ತಾ ಬಂದಿರುವ ಬಾಂಗ್ಲಾ ದೇಶದ ಮುವತ್ತೊಂದು ವಯಸ್ಸಿನ ತಸ್ಲೀಮಾ ನಸರಿನ್ ಈಗ ಮುಲ್ಲಾಗಳ, ಸರಕಾರದ ಮತ್ತು ಜತೆಗೆಯೇ ಪ್ರಗತಿಪರರ, ಮಹಿಳಾ ಗುಂಪುಗಳ ಅವಕೃಪೆಗೆ ಒಳಗಾಗಿದ್ದಾಳೆ. ಕಟ್ಟಾ ಸಂಪ್ರದಾಯವಾದಿಗಳ ಒಂದು ವರ್ಗ ಅವಳನ್ನು ನೇಣು ಹಾಕುವಂತೆ ಒತ್ತಾಯಿಸಿದೆಯಲ್ಲದೆ, ಅವಳನ್ನು ಕೊಂದು ತಂದವರಿಗೆ 50,000 ಟಾಕಾವನ್ನು ಬಹುಮಾನ ಕೊಡುವುದಾಗಿ ಘೋಷಿಸಿಕೊಂಡಿದೆ.

ಸಮಾಜದ ಧಾರ್ಮಿಕ ಸಂರಚನೆಗೆ ಪೆಟ್ಟಾಗುವಂತಹ ಅಭಿವ್ಯಕ್ತಿ ಬಂದಾಗಲೆಲ್ಲಾ ಆ ನೋವಿಗೆ ಅಮಾನುಷ ರೀತಿಯಲ್ಲಿ ಪ್ರತಿಕ್ರಿಯಿಸುವಂತದ್ದು ಕಂಡು ಬರುತ್ತಲೇ ಇದೆ ಎಲ್ಲ ಸಮಾಜಗಳಲ್ಲೂ. ಅಂತಹ ವ್ಯಕ್ತಿಗಳನ್ನು ಗುಂಪುಗಳನ್ನು ಕೊನೆಗಾಣಿಸಿ ಬಿಡುವುದೇ ಇಲ್ಲೆಲ್ಲಾ ಅಂತಿಮ ಮಾರ್ಗೋಪಾಯವಾಗಿ ಪ್ರಕಟಗೊಂಡಿರುವುದಾದರೂ ಅಂತಹ ವ್ಯಾಪಕ ಕ್ರಿಯೆ ಸಾಧ್ಯವಿಲ್ಲದ್ದರಿಂದ ಹೀಗೆ ಒಮ್ಮೊಮ್ಮೆ ಒಬ್ಬೊಬ್ಬ ಸಲ್ಮಾಂ ರಶ್ದಿಗಳನ್ನು, ತಸ್ಲೀಮಾ ನಸರಿನ್‌ಗಳನ್ನು ಸಾಂಕೇತವಾಗಿ ಬಳಸಿಕೊಳ್ಳುವುದುಂಟು. ಬಾಂಗ್ಲಾದೇಶದಲ್ಲೇನೂ ಧರ್ಮದೆಡೆಗಿನ ಇಂತಹ ಟೀಕೆಗಳು ನಡೆದಿಲ್ಲವೆಂತಲ್ಲ. ಪ್ರಗತಿಪರ ಸಂಘಟನೆಗಳು ಮಹಿಳಾ ವಿಮೋಚನೆಗೆ ಆಂದೋಲನ ನಡೆಸುತ್ತಲೇ ಬಂದಿವೆ. ಆದರೆ ತಸ್ಲೀಮಾಳ ಬರವಣಿಗೆಗೆ ರೊಚ್ಚಿ ಗೆದ್ದಿದೆ ಸಾಂಪ್ರದಾಯಿಕ ಇಸ್ಲಾಂ ಸಮಾಜ.

ಸಂಪ್ರದಾಯವಾದಿಗಳ ಆಕ್ರೋಶದಿಂದ ಹೆಸರು-ಖ್ಯಾತಿಗಳಿಗೆ ತುಡಿಯುತ್ತಿದ್ದ ತಸ್ಲೀಮಳಿಗೆ ಹುಮ್ಮಸ್ಸು ಸಿಕ್ಕಿ 'ಲಜ್ಜಾ' ಎನ್ನುವ ಅತ್ತ ಕಾದಂಬರಿಯೂ ಅಲ್ಲದ ಇತ್ತ ಚಾರಿತ್ರಿಕ ಬರಹವೂ ಅಲ್ಲದ 79 ಪುಟಗಳ ಪೇಲವ ಪುಸ್ತಕವನ್ನು ಬರೆದಳು. ಬಾಂಗ್ಲಾದೇಶದ ಅಲ್ಪಸಂಖ್ಯಾತ ಹಿಂದೂಗಳು ಮುಸಲ್ಮಾನರಿಂದ ದಮನಿಸಲ್ಪಟ್ಟಿರುವ ಚಾರಿತ್ರಿಕ ಸತ್ಯವನ್ನು ಹೇಳುತ್ತಾ 1992, ಡಿಸೆಂಬರ್

ಮುಂದುವರೆದಿದೆ 23ನೇ ಪುಟ

## ಹುಲಿಗೆವ್ವ, ಎಲ್ಲವ್ವನೇ !

---

ಸವದತ್ತಿ ಎಲ್ಲವ್ವ, ಕರಿಬಾಳೆ ಹುಲಿಗೆವ್ವ,
ದುನಿಯಾದ ದುರುಗವ್ವನೇ,
ಉದೋ ಅನ್ನೋ ಶಬ್ದ ನೀ ಹೇಳಬೇಕವ್ವ,
ಹುಲಿಗೆವ್ವ ಎಲ್ಲವ್ವನೆ

ಚೌಡೀಕಿ ಚಂದವ್ವ ಜಗ ಹೊತ್ತ ಜೋಗವ್ವ
ಭಂಡಾರದ ಗುಂಡವ್ವನೇ,
ಉದೋ ಉದೋ ಅನ್ನೋದು ಊಟಕ್ಕಲ್ಲೇನಾ
ಹುಲಿಗೆವ್ವ ಯಲ್ಲವ್ವನೆ

ನಮ್ಮೂರ ಸೀಮ್ಯಾಗ ಇನ್ನೊಬ್ಬ ಜೋಗತಿ
ಅಪ್ಪವ್ವ ಗಳಿಸಿದ ತಿಪ್ಪ್ಯಾಗ್ಹುಟ್ಟಿದಾಕಿ
ಎಲ್ಲವ್ವನ ಹೆಸರೇಳಿ ಎತ್ತರ ಬೆಳೆದಾಕಿ
ಮದುವೆ ಇಲ್ಲದೆ ನಾಲ್ಕು ಗಂಡುಗಳಾದರೆ
ಹುಟ್ಟಿದ ಮಕ್ಕಳಿಗಿ ಊರೆಸರ ಇಟ್ಟಾಕಿ

ಆಡಿವ್ಯಾಗ ಆಸರಿಲ್ಲಿ ಊರಾಗ ಬ್ಯಾಸರಿಲ್ಲ
ಮೂರು ಮೊಳ ಜಾಗದ ಮುರುಕು ಗುಡಿಸಲಾಗ
ಜಣ್ ಎಂಬ ಜಾಗಟೆ ಜಂತೀಗೆ ತೂಗಾಕಿ
ಅರ್ಧ ಗುಡಿಸಲ ತುಂಬ ಯಲ್ಲವ್ವನ ಗದ್ದೀಗೆ
ನಾಲ್ಕು ಮಕ್ಕಳ ಜೊತೆಗೆ ನಾಯಿಂತೆ ಬಾಳಾಕಿ
ಊರೂರು ತಿರುಗಿ ನೀ ಉದೋ ಉದೋ ಎಂದರೂ
ಶ್ಯಾರಿ ಮುಗ್ಗ್ಲಿ ಜ್ವಾಳ ಯವ್ವುಡೂಲಾಗೇ

ಹಸಿದಂಥ ಮಕ್ಕಳು ಅನ್ನಕ್ಕಲುಬುತಾವ
ಮಾರಿ ಸಪ್ಪಗ ಮಾಡಿ ಬೋರಾಡಿ ಅಳುತಾವ

ವಿರಿಡಾಡೋ ಕಂದನಿಗಿ ಮುರುಕು ರೊಟ್ಟಿಯ ಚಿಂತೆ
ಗೇಣು ದೇಹದ ಮೇಲೆ ಹರಕು ಬಟ್ಟೆಯ ಚಿಂದಿ
ಮಾಯಕಾರ್ತಿ ಜೋಗವ್ವನ ಮೈಯೆಲ್ಲ ಬೆತ್ತಲೆ
ಮಾನ ಮುಚ್ಚಲು ಮತ್ತೆ ಮೈ ಮಾರುತ್ತಾಳೆ

ಒಂದು ದೇವರ ಹಿಂದ ಒಂಭತ್ತು ಕೊಟ್ಟಾನು
ಸರ ದೇವರ ಕಟ್ಟಿದ್ದಿ ಸೆರಗ್ಯಾಕ ಹಾಸ್ತಿದ್ದಿ
ಉದೋ ಉದೋ ಎನ್ನುತ ಉಪವಾಸ ಬೀಳ್ತಿದ್ದಿ
ಹಾಲುಣ್ಣೋ ಕಂದಾನ ಬಿಕ್ಷಾಕ ಹಚ್ಚಿದ್ದಿ
ಎಲ್ಲರಿಗೆ ಎಲ್ಲವ್ವ ನಿನಗೇನು ಇಲ್ಲವ್ವ
ಆ ಸವದತ್ತಿ ಎಲ್ಲವ್ವ ಸಾಹುಕಾರನ ಮಗಳವ್ವ

ಒಂದೂರಿಗೆ ಕೊಟ್ಟಿದ್ರೆ ಒಬ್ಬವ್ವ ಮಡದ್ಯಾಗಿ
ಅತ್ತೆ ಮಾವಂದಿರಿಗೆ ಮುದ್ದಿನ ಸೊಸೆಯಾಗಿ
ನಾದಿನಿ ಮೈದುನಗೆ ಪ್ರೇಮದ ಅತ್ತಿಗೆಯಾಗಿ
ಹುಟ್ಟಿದ ಮಕ್ಕಳಿಗೆ ಮಡಿವಂತ ತಾಯಾಗಿ
ಎಲ್ಲವ್ವನ ಹೆಸರೇಳಿ ಎಲ್ಲಾನೂ ಕಳಕೊಂಡೆ
ಊರಿಗೆ ಸೂಳೆ ಎಂಬ ಹೆಸರಿಟ್ಟುಕೊಂಡೆ

ಆ ಎಲ್ಲವ್ವನ ಗೆಳೇತನ ಇಲ್ಲೀಗೆ ಸಾಕವ್ವ
ಭಂಡಾರ ಹಚ್ಚುವ ಭಂಡಾಟ ಸಾಕವ್ವ
ಆ ಸವದತ್ತಿ ಗುಡ್ಡಾಪ ನೀ ಹತ್ತ ಬೇಡವ್ವ
ಕಟ್ಟಿದ ಸರದೇವ್ರ ಚಟ್ಟಂತ ಹರಿಯವ್ವ
ದಲಿತ ಸಂಘವ ಸೇರಿ ದನಿಗೂಡಿ ಹಾಡವ್ವ
ಜಾಗಟೆ ನುಡಿಸುತ ಜನದಾಗ ಸೇರವ್ವ
ಸಾಗವ್ವ ಜೋಗವ್ವನೆ

ಮಾನಸಯ್ಯ,
ರಾಯಚೂರು

ಆರರ ಅಯೋಧ್ಯೆಯಲ್ಲಿನ ಬಾಬರಿ ಮಸೀದಿಯ ನಿರ್ನಾಮದ ನಂತರದಲ್ಲಿ ಕೋಮುಗಲಭೆಯಲ್ಲಿ ಬಾಂಗ್ಲಾ ದೇಶದ ಮುಸಲ್ಮಾನರು ಹಿಂದೂಗಳ ಮೇಲೆ ತೋರಿದ ಕ್ರೌರ್ಯವನ್ನು ಬೆಳಕಿಗೆ ತರುವುದು ಈಕೆಯ ಉದ್ದೇಶ ವಾಗಿತ್ತು. ಈ ಬಾರಿ ಪ್ರಗತಿಪರ ಬರಹಗಾರರು ಕೂಡ ಈಕೆಯ ಬರಹವನ್ನು ತೀವ್ರವಾಗಿ ವಿರೋಧಿಸಿ "ಭಾರತ ದಲ್ಲಿ ಮಗದೊಂದು ಕೋಮುಗಲಭೆಗೆ ಎಡೆ ಮಾಡ ಬಲ್ಲಂತಹ ಬೇಜಾವಾಬ್ದಾರಿಯುತ ಪುಸ್ತಕ" ಎಂದು ಕಟುವಾಗಿ ಟೀಕಿಸಿದರು. ಕೋಮು ದ್ವೇಶ ಹುಟ್ಟಿಸು ವಂತಹ ಪುಸ್ತಕವೆಂದು ಬಾಂಗ್ಲಾ ಸರಕಾರ ಇದನ್ನು ಬಹಿಷ್ಕರಿಸಿತು.

ಮಹಿಳಾ ಗುಂಪುಗಳು ಈಕೆಯೊಬ್ಬ 'ನಿಜ ಸ್ತ್ರೀವಾದಿ' ಯಲ್ಲ ಎಂದು ಟೀಕಿಸುತ್ತಾ ಅವಳಿಗೆ ತಮ್ಮ ಯಾವ ಬೆಂಬಲವನ್ನೂ ನೀಡುತ್ತಿಲ್ಲ.

ಬಿಜೆಪಿ ಮತ್ತು ಇತರ ಜತೆ ಸಂಘಟನೆಗಳು ಮಾತ್ರ ತಮ್ಮ ಕೋಮುವಾರು ರಾಜಕೀಯ ಪ್ರಚಾರಕ್ಕಾಗಿ ಅವಳ ಪುಸ್ತಕವನ್ನು ಇಷ್ಟ ಬಂದಂತೆ ಬಳಸಿಕೊಂಡಿವೆ. ಆಕೆಗೆ ಸಂಪೂರ್ಣ ರಕ್ಷಣೆ ಒದಗಿಸುವಂತೆ ದೆಹಲಿಯಲ್ಲಿನ ಬಾಂಗ್ಲಾದೇಶದ ಮಿಷಿನ್‌ಗೆ ಮನವಿ ಸಲ್ಲಿಸಿವೆ.

ಖ್ಯಾತಿ ಬಯಸಿದ ತಸ್ಲೀಮಾಳಿಗೆ ವಿಶ್ವವಿಖ್ಯಾತಿ ಯೇನೋ ದೊರೆತಿದೆ. ಆದರೆ ಅದಕ್ಕೆ ಆಕೆ ತೆತ್ತ ಬೆಲೆ- ದಿನನಿತ್ಯ ಜೀವ ಭಯದಲ್ಲಿ ಕಾಲ ನೂಕುವಂತಹ ಸ್ಥಿತಿ.

## ಓದುಗರ ಗಮನಕ್ಕೆ

- 'ಮಾನಸ' ಸಂಪರ್ಕ ವಿಳಾಸದಲ್ಲಿ ಸಂಪೂರ್ಣ ನೆಲೆ ಯೂರಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅಂತಿಮವಾಗಿ ತಿಳಿಸುವವರೆಗೂ ದಯವಿಟ್ಟು ಎಂ. ಒ. ಚೆಕ್ಕುಗಳನ್ನು ಮತ್ತು ಡ್ರಾಫ್ಟ್‌ಗಳನ್ನು **ಕಾಡುಗೋಡಿಯ** ವಿಳಾಸಕ್ಕೆ ಕಳಿಸಬೇಕೆಂದು ಕೇಳಿಕೊಳ್ಳುತ್ತೇವೆ.

- 'ಮಾನಸ'ವನ್ನು ಸಂಪರ್ಕಿಸಬಯಸುವವರಿಗಾಗಿ ಇನ್ನು ಮುಂದೆ ತಿಂಗಳ ಪ್ರತಿ ಎರಡನೇ ಶನಿವಾರ ಮತ್ತು ಕೊನೆಯ ದಿನದಂದು 'ಸಂಪರ್ಕ ವಿಳಾಸ'ವೆಂದು ಸೂಚಿ ಸಿರುವ ಕಛೇರಿಯು ಮಧ್ಯಾಹ್ನ 2 ಗಂಟೆಯಿಂದ ಸಂಜೆ 5 ಗಂಟೆಯವರೆಗೂ ತೆರೆದಿರುತ್ತದೆ. 'ಮಾನಸ' ಬಳಗದ ಯಾರಾದರೂ ಅಲ್ಲಿ ಕಾಣಸಿಗುತ್ತೇವೆ. ಈ ದಿನ-ಸಮಯ ಗಳಲ್ಲಿ ನಿಮಗೆ ಸ್ವಾಗತವಿದೆ.

**–ಸಂಪಾದಕೀಯ ಮಂಡಳಿ**

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ



C.G. MANJULA
9, 3rd Cross
Markham Road
Ashok Nagar
BANGALORE- 560 025.

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067